ಮುಖಚಿತ್ರ

ಶ್ರೀ ಆರ್. ಎಸ್. ನಾಯಿಡು

ಪ್ರಥಮ ಮುದ್ರಣ : ೧೯೫೮ ರ ಜುಲೈ ತಿಂಗಳಿನಲ್ಲಿ, ಅಕ್ಷರ ಪ್ರಕಾಶನ (ಸಾಗರ-ಶಿವಮೊಗ್ಗ) ಅವರಿಗಾಗಿ, ಶ್ರೀ ನ. ಕೃಷ್ಣ, ಚೇತನ ಮುದ್ರಾಲಯ, ಮೈಸೂರು- ಅವರಿಂದ ಮುದ್ರಿತವಾಯಿತು.

ಬೆಲೆ : ಒಂದೂವರೆ ರೂಪಾಯಿ

# ಅರಿಕೆ

ಮುಂದಿನ ಹನ್ನೆರಡು ಶೀರ್ಷಿಕೆಗಳಡಿಯಲ್ಲಿ ನಮ್ಮ ನಾಡಿನ ಗೀತ ಸಂಪ್ರದಾಯವೊಂದನ್ನು ಪರಿಚಯ ಮಾಡಿಸಿಕೊಡಲೆತ್ನಿಸಿದ್ದೇನೆ.

ಈ ಸಂಪ್ರದಾಯದ ಆಗರ್ಭಪರಿಚಯ ಪಡೆದ ನಾನು ಬಾಲ್ಯದಲ್ಲಿ ಈ ಗೀತಗಳಿಂದ ತುಂಬ ಮೋಹಿತನಾಗಿದ್ದೆ. ೧೯೪೭ ರಿಂದ ಈ ಗೀತ ಗಳನ್ನು ಸಂಗ್ರಹಿಸಲು ಮೊದಲುಮಾಡಿದೆ. ೧೯೫೧ ರಲ್ಲಿ ಈ ಗೀತಸಂಪ್ರ ದಾಯವನ್ನು ಕುರಿತು ನಾನು ಬರೆದ ಪರಿಚಯಲೇಖನವೊಂದು 'ಪುಸ್ತಕ ಪ್ರಪಂಚ' ದಲ್ಲಿ ಪ್ರಕಟವಾಯಿತು; ಅದೇ ವರ್ಷ ಮೈಸೂರು 'ಆಕಾಶ ವಾಣಿ' ಯ ಕೇಂದ್ರದಿಂದ ಈ ಕುರಿತು ಶಬ್ದಚಿತ್ರ ಪ್ರಸಾರವಾಯಿತು. ಅಲ್ಲಿಯವರೆಗೆ, ನನಗೆ ತಿಳಿದಂತೆ, ಈ ರಮ್ಯಸಂಪ್ರದಾಯವನ್ನು ಕುರಿತ ಪರಿಚಯ ಎಲ್ಲಿಯೂ ಪ್ರಕಟವಾಗಿರಲಿಲ್ಲ. ೧೯೫೨ ರಲ್ಲಿ 'ಜನಪ್ರಗತಿ' ಯವರು ಈ ಗೀತಗಳನ್ನು ಕುರಿತ ನನ್ನ ಲೇಖನಮಾಲೆಯೊಂದನ್ನು ಪ್ರಕಟಿ ಸಿದರು. ಅದಾದಮೇಲೆ ಈಚೆ, 'ಪ್ರಜಾವಾಣಿ' 'ಜನಪ್ರಗತಿ' ಮೊದ ಲಾದ ಪತ್ರಿಕೆಗಳಲ್ಲಿ ಕೆಲವು ಬಿಡಿ ಬರಹಗಳನ್ನು ಬರೆದೆ; 'ಆಕಾಶವಾಣಿ' ಯ ಮೈಸೂರು ಬೆಂಗಳೂರು ಕೇಂದ್ರಗಳಿಂದ ಈ ಗೀತಗಳನ್ನವಲಂಬಿಸಿ ರಚಿಸಿದ ಕೆಲವು ರೂಪಕಗಳು ಪ್ರಸಾರಗೊಂಡವು. ಹೀಗೆ ಈವರೆಗೆ ಪ್ರಕಟ ವಾಗಿರುವ ಬರಹಗಳಲ್ಲಿ ಕೆಲವನ್ನು ಆಯ್ದು ತಿದ್ದಿ ಇಲ್ಲಿ ಸಂಕಲಿಸಿ ಕೊಡುತ್ತಿದ್ದೇನೆ.

ಈ ಗ್ರಂಥದ ಹನ್ನೆರಡು ಬರಹಗಳಲ್ಲಿ ಮೊದಲನೆಯದು 'ದೀಪ ನೀಡುವ' ಸಂಪ್ರದಾಯವನ್ನು ಪರಿಚಯಮಾಡಿಕೊಡುತ್ತದೆ. ಕೊನೆ ಯದು ದೀಪಗೀತಗಳಿಂದ ಕೆಲವು ಮುಕ್ತಕಗಳನ್ನು ಆಯ್ದು ಪೋಣಿಸಿರುವ ಉಪಸಂಹಾರಕ ಟಿಪ್ಪಣಿಯಾಗಿದೆ. ನಡುವಿನ ಹತ್ತು ಬರಹಗಳಲ್ಲಿ ದೀಪ ಗೀತಗಳಿಂದಾಯ್ದ ಕಥಾನಕಗಳಿವೆ. ಇವುಗಳಲ್ಲಿ ಮೂಲದ ಗೀತೆಯನು ಸಾಲೂ ಬಿಡದೆ ಉದ್ಧರಿಸಿದ್ದೇನೆ. ನಡುನಡುವೆ ಎಡೆಯಿರುವಲ್ಲೆಲ್ಲ ಅನು

ವ್ಯಾಖ್ಯೆ ಹಬ್ಬಿಕೊಂಡಿದೆ. ಅಂತೆಯೇ ಈ ಕಥಾನಕಗಳಲ್ಲಿನ ವ್ಯಾಖ್ಯಾಭಾಗವನ್ನು ಕಳಚಿದರೆ ಸಂಪೂರ್ಣವಾದ ಮೂಲಗೀತೆ ದೊರೆಯುತ್ತದೆ. ಗೀತಗಳಲ್ಲಿ ಒಂದೊಂದಕ್ಕೂ ದೊರೆತ ಪಾಠಾಂತರಗಳನ್ನು ಗಮನಿಸಿ ಉತ್ತಮವೆಂದು ತೋರಿದುದನ್ನು ಆಯ್ದುಕೊಂಡಿದ್ದೇನೆ. ಈ ಗೀತಗಳಿಗೂ ನನಗೂ ಇರುವ ಸಂಬಂಧಸಾಮೀಪ್ಯದಿಂದ ಹಾಗೂ ಇವು ಎಂದಿನಿಂದಲೂ ಬದಲುಗೊಳ್ಳುತ್ತ ಬೆಳೆಯುತ್ತಿರುವುದು ಸ್ವಾಭಾವಿಕವಾದ್ದರಿಂದ ಉಚಿತ ಕಂಡು ಹಲವೆಡೆ ಗೀತೆಯ ಸಾಲುಗಳನ್ನು ಹಿಂದುಮುಂದು ಮಾಡಿದ್ದೇನೆ, ಕೆಲವೆಡೆ ತಿದ್ದಿದ್ದೇನೆ, ಕೆಲವೆಡೆ ಚೂರುಪಾರು ಕೂಡಿಸಿದ್ದೇನೆ. ಆದರೆ ಇದಾವುದೂ ಮೂಲವನ್ನು ಉತ್ತಮಗೊಳಿಸಿಯೇನೆಂಬ ಧಾರ್ಷ್ಟ್ಯದಿಂದಲ್ಲ, ಹಲವು ಸಾಲಗೆಯಲ್ಲಿ ಹೊರಳಿ ವಿರೂಪಗೊಂಡದ್ದನ್ನು ಹೊಂದಿಸಿಕೊಳ್ಳುವ ಸಲುವಾಗಿ; ಮೂಲದ ಸರಾಗಭಾವ ನಿರ್ಜೀವಮುದ್ರಣದಿಂದ ಪೇಲವಗೊಳ್ಳದಿರಲೆಂಬ ಕಾರಣಕ್ಕಾಗಿ. ಇನ್ನು ವ್ಯಾಖ್ಯೆಯನ್ನು ಕುರಿತು: ಇಲ್ಲಿನ ವ್ಯಾಖ್ಯಾಕಾರ ತಾನೂ ಒಂದು ಪಾತ್ರವಾಗಿ—ಒಮ್ಮೆ ಕಥಾಪಾತ್ರಗಳ ಕೂಡ ತತ್ಕ್ಷೇತ್ರದಲ್ಲೇ ನಿಂತು ಅವರ ಭಾವಗಳಲ್ಲಿ ಪಾಲುಗೊಳ್ಳುವವನಾಗಿ, ಒಮ್ಮೊಮ್ಮೆ ಬೇರೆಬೇರೆ ನೆಲೆನಿಲುವುಗಳಿಂದ ಅವರ ಭಾವಗಳಿಗೆ ಪ್ರತಿಭಾವಗಳನ್ನು ಬಿಂಬಿಸುವವನಾಗಿ — ಕಥೆಯೊಡನೆ ಮೇಳಗೊಂಡು ಅಲೆಯುತ್ತಾನೆ. ಕಥಾಪಾತ್ರಗಳ ನಡುವೆ ಈತನೊಂದು ಸೂತ್ರಪಾತ್ರನಾಗಿದ್ದಾನೆ.

....ಇಂಥ ಗೀತಗಳನ್ನು ಸಂಗ್ರಹಿಸಿಕೊಡುವಲ್ಲಿ ಅವುಗಳನ್ನು, ಸಾಧ್ಯವಾದರೆ ಪಾಠಾಂತರಸಮೇತ, ಯಥಾವತ್ ಕೊಡುವುದು ಹಾಗೂ ಕುರಿತು ಹೇಳುವುದಿದ್ದರೆ ಬೇರೆಯಾಗಿ ಹೇಳುವುದು ಒಂದು ಪದ್ಧತಿ. ಕೈಗೆ ಕೈ ಕೂಡಿ ಬಂದರೆ ನನ್ನ ಸಂಗ್ರಹದಲ್ಲಿರುವ ಇನ್ನು ಕೆಲವು ಗೀತಗಳನ್ನು ಆ ಪದ್ಧತಿಯಲ್ಲಿ ಪ್ರಕಟಿಸುವ ಆಸೆಯೂ ಇದೆ. ಆದರೆ ಪ್ರಸ್ತುತ ನಾನು ಅನುಸರಿಸಿರುವ ಪದ್ಧತಿ ಆ ಸಂಶೋಧನ ಪದ್ಧತಿಗಿಂತ ಬೇರೆಯಾಗಿದೆ. ಇದನ್ನು ಬೇಕಿದ್ದರೆ ಸಂಭಾವನ ಪದ್ಧತಿ ಅಥವಾ ಪರಿಭಾವನ ಪದ್ಧತಿ ಎನ್ನಬಹುದು. ದೀಪಾವಳಿಯ ಪ್ರಶಾಂತರಾತ್ರಿಗಳಲ್ಲಿ ನೂರಗಲ ಚೆಲ್ಲುವ ಮಂದದೀಪದ ಮಸಕುಬೆಳಕಿನೆದುರು, ಜೋಡುಗೊರಳುಗಳ ತನಿತನಿಯಾದ ಏರಿಳಿತಗಳಲ್ಲಿ

ಈ ಗೀತಗಳನ್ನು ಕೇಳಿದಾಗ ನಾನು ಯಾವ ಅನುಭವ ಪಡೆದೆನೋ ಆ ಅನುಭವವನ್ನು ಓದುಗರಿಗೆ ದೊರಕಿಸಿಕೊಡಲೆತ್ನಿಸುವುದು ಇದರ ಉದ್ದೇಶ. ಈ ಕಾರಣಕ್ಕಾಗಿಯೇ ನಾನು ಗೀತಗಳನ್ನು ಯಥಾವತ್ ಕೊಡುವುದಾಗ ಲಿಲ್ಲ. ಈ ಕಾರಣಕ್ಕೆಂದೇ ವ್ಯಾಖ್ಯಾಕಾರನನ್ನು ಬಳಸಿಕೊಳ್ಳಬೇಕಾಯಿತು, ವ್ಯಾಖ್ಯೆಯ ಬಿಗಿತದಿಂದ ಗೀತಗಳ ಧ್ವನಿ ಸೀಮಿತವಾಗಿಬಿಡಬಹುದೆನ್ನುವ ಸಂಶಯವನ್ನೂ ಕಡೆಗಣಿಸಿ.

....ದೀಪಾವಳಿಯ ರಾತ್ರಿಗಳಲ್ಲಿ ಮನೆಮನೆಗೆ ಹೋಗಿ ದೀಪ ಸೀಡಿ ಹಾಡುವ ಈ ಸಂಪ್ರದಾಯ, ನನಗೆ ತಿಳಿದಂತೆ, ಶಿವಮೊಗ್ಗ ಹಾಗೂ ಉತ್ತರ ದಕ್ಷಿಣ ಕನ್ನಡ ಜಿಲ್ಲೆಗಳ ಭಾಗಗಳಲ್ಲಿ ಇಂದಿಗೂ ಪ್ರಚಲಿತವಿದೆ. ಬಹು ಭಾಗಗಳಲ್ಲಿ ಇದಕ್ಕೆ 'ಹಬ್ಬ ಹಾಡುವುದು' ಅಥವಾ 'ದೀಪನೀಡುವುದು' ಎಂಬ ಹೆಸರಿದೆ. ತೀರ್ಥಹಳ್ಳಿಯ ಪ್ರದೇಶದಲ್ಲಿ ಈ ದೀಪನೀಡುವ ತಂಡ ದವರನ್ನು 'ಅಂಟಿಗೆ ಪಂಟಿಗೆಯವರು' ಎನ್ನುತ್ತಾರೆ. ಎರಡನೆಯ ಹೆಸರು ಹೇಗೆ ಬಂದಿತೋ ತಿಳಿಯದು. ಈ ಸಂಪ್ರದಾಯ ಎಷ್ಟು ಹಿಂದಿನ ದೆಂದು ತಿಳಿಯಲು ಸದ್ಯ ಆಧಾರಗಳಿಲ್ಲ. ಸುಮಾರು ಕಳೆದ ನೂರೈವತ್ತು ವರ್ಷಗಳಿಂದಂತೂ ಈ ಪದ್ಧತಿ ನಡೆದುಕೊಂಡು ಬಂದಿದೆ. ಈ ಹಬ್ಬ ಹಾಡುವ ಸಂಭ್ರಮವನ್ನು ಹಿಂದೆ ನಾನು ಕಂಡ ಬಗೆಯಲ್ಲಿ ಮೊದಲ ಬರಹ ದಲ್ಲಿ ಪರಿಚಯಮಾಡಿಸಿಕೊಟ್ಟಿದ್ದೇನೆ. ಆದರೆ ಈಚೆ ವರ್ಷವರ್ಷಕ್ಕೆ ಈ ಸಂಪ್ರದಾಯ ಬಣ್ಣ ಕಳೆದುಕೊಳ್ಳುತ್ತಿದೆ, ಖಿಲವಾಗುತ್ತಿದೆ. ಮುಂದಿನ ವರ್ಷಗಳಲ್ಲಿ ಇದು ಈ ಭಾಗದ ಪ್ರಾಚೀನಸಂಸ್ಕೃತಿಗಳ ಇತಿಹಾಸದಲ್ಲಿ ಭದ್ರ ವಾದ ಒಂದು ಪುಟ ಹಿಡಿದು ಕುಳಿತುಬಿಟ್ಟರೂ ಆಶ್ಚರ್ಯವಿಲ್ಲ.

....ಈ ಗೀತಗಳನ್ನು ನಾನು ಮೊದಲು ಯಾವ ದೃಷ್ಟಿಯಿಂದ ಸಂಗ್ರ ಹಿಸಿದೆನೋ ತಿಳಿಯದು. ಆದರೆ ಅನಂತರ ಅವು ನನ್ನ ಕಾವ್ಯಾಭ್ಯಾಸ ದಲ್ಲಿ ಮಹತ್ವದ ಸಾಮಗ್ರಿಗಳಾಗಿ ಪರಿಣಮಿಸಿದವು. ನನ್ನ ಕಾವ್ಯ ಜೀವನಕ್ಕೊದಗಿದ ಅಮೌಲ್ಯಪೌಷ್ಟಿಕಗಳಲ್ಲಿ ಈ ಕಾವ್ಯರಾಶಿ ಮುಖ್ಯ ವಾದದ್ದು. ಅಂತೆಯೇ ಈ ಗ್ರಂಥದ ಪ್ರಕಟನೆಯ ಮೂಲಕ ನನ್ನ ವೈಯಕ್ತಿಕ ಋಣವೊಂದನ್ನು ಸೂಚಿಸುತ್ತಿದ್ದೇನೆ.

....ಬೇರೆ ಬೇರೆ ಕಡೆಯ ದೀಪ ಸೀಡುವ ತಂಡದವರು ತಮ್ಮ ಸಹಜ

ಸಂಕೋಚವನ್ನೂ ಮೀರಿ ಈ ಗೀತಗಳ ಸಂಗ್ರಹಕ್ಕೆ ಅನುವುಮಾಡಿಕೊಟ್ಟಿದ್ದಾರೆ. ನನ್ನ ಅನೇಕ ಬಂಧುಗಳು ಹಿರಿಯರು ಗೆಳೆಯರು ಈ ಸಂಗ್ರಹಣದಲ್ಲಿ ನೆರವಾಗಿದ್ದಾರೆ. ಅವರೆಲ್ಲರಿಗೂ ಈ ಪ್ರಕಟನೆ ಕೃತಜ್ಞತೆಯ ಸಂಕೇತವಾಗಲೆಂದು ಆಶಿಸುತ್ತೇನೆ. ನನ್ನ ಬಳಿಯ ಗೆಳೆಯರು ಕೆಲವು ಗೀತಗಳನ್ನು ಅಲ್ಲಲ್ಲಿ ಹಾಡಿ ಪ್ರಸಿದ್ಧಗೊಳಿಸಿದ್ದಾರೆ. ನನಗೆ ಅಪರಿಚಿತರಾದ ಹಾಡುಗಾರ್ತಿಯರು 'ಆಕಾಶವಾಣಿ' ಯಲ್ಲಿ ಈ ಗೀತಗಳನ್ನು ಹಾಡಿರುವುದನ್ನೂ ಕೇಳಿದ್ದೇನೆ. ಹಿಂದೆ ಸೂಚಿಸಿರುವ ಪತ್ರಿಕಾ ಸಂಪಾದಕರುಗಳು ಹಾಗೂ 'ಆಕಾಶವಾಣಿ' ಯ ಅಧಿಕಾರಿಗಳು ಮತ್ತು ಕಲಾವಿದರು ಈ ಗೀತೆಗಳ ಪ್ರಸಾರಕ್ಕೆ ಪ್ರೋತ್ಸಾಹವಿತ್ತಿದ್ದಾರೆ. ಈ ಎಲ್ಲರಿಗೂ ನನ್ನ ಅಭಿನಂದನೆಗಳು. ಗ್ರಂಥದ ಮುದ್ರಣವನ್ನು ಆಗುಮಾಡಿಕೊಟ್ಟ ಶ್ರೀ ನ. ಕೃಷ್ಣ ಅವರಿಗೂ, ಚಿತ್ರಾಲಂಕಾರಕ್ಕೆ ಕಾರಣರಾದ ಹಿರಿಯ ಕಲಾವಿದ ಶ್ರೀ ಆರ್. ಸೀತಾಪತಿನಾಯಿಡು ಅವರಿಗೂ ನನ್ನ ಕೃತಜ್ಞತೆಗಳು ಸಲ್ಲಬೇಕು.

ನನ್ನ ನೆಲದ ಈ ಸಿರಿ ನಾಡಿನವರಿಗೆಲ್ಲ ಪ್ರಿಯವಾಗಲೆಂದು ಆಶಿಸುತ್ತೇನೆ.

**ಕೆ. ವಿ. ಸುಬ್ಬಣ್ಣ**



ಈ ಗ್ರಂಥವನ್ನು

ನಮ್ಮ ನಾಡಿನ ಜಾನಪದ ದೀಪಧಾರಿಗಳಿಗೆ

ಪ್ರೀತಿಯಿಂದ ಒಪ್ಪಿಸಿದ್ದೇನೆ.

# ಪರಿವಿಡಿ

# ೧. ತಂದೇವೀ ದೀಪಾನ ಕೊಳ್ಳೀರಯ್ಯ

ದೀಪಾವಳಿ–ಬೆಳಕಿನ ಹಬ್ಬ; ಪ್ರಕೃತಿಯು ತಾಮಸಕಳೆ ಕಳೆದು ಹಗುರವಾಗಿ ಹರೆಯ ಚಿಗುರಿರಲು, ನೆಲ ಹೊಲಗಳು ಹಸಿರಾಗಿರಲು, ಆನಂದದ ಮಾಯಕಾರ ಕಾರ್ತಿಕ ಮೊದಲ ಮೆಲುಹೆಜ್ಜೆಗಳನ್ನಿಡುತ್ತ ನೆಲಕ್ಕಿಳಿಯುವಾಗಿನ ಗೆಜ್ಜೆಯ ಮೃದುಕಿಂಕಿಣಿಯ ಲಹರಿಯಂತೆ ಬರುತ್ತದೆ ಈ ಹಬ್ಬ. ದೀಪಾವಳಿ ಬಂದಿತೆಂದರೆ ಯಾವುದೋ ಪ್ರಿಯವಾದ ಒಸಗೆ ಬಂದಂತೆ ನಾಡಿಗೆ ನಾಡೇ ನಲವುದಾಳುತ್ತದೆ.

ಮಲೆನಾಡಿನ ಹಳ್ಳಿಗಳಲ್ಲಂತೂ ಇದಕ್ಕಿಂತ ಮಿಗಿಲಾದ ಹಬ್ಬವೇ ಇಲ್ಲ. ಇದಕ್ಕೆ 'ದೊಡ್ಡ ಹಬ್ಬ' ಎನ್ನುವುದೇ ಅಲ್ಲಿಯ ವಾಡಿಕೆ. ಹತ್ತು ಹಣತೆಗಳನ್ನು ಹಚ್ಚಲು ಎಣ್ಣೆಯಿಲ್ಲದವನ ಮನೆಯಲ್ಲೂ ಇನ್ನಿಲ್ಲದ ಸಂತಸ, ಸಂಭ್ರಮ.

ನರಕ ಚತುರ್ದಶಿಯಂದು ಈ ಹಬ್ಬದ ನಾಂದಿ. ಆ ದಿನವನ್ನು 'ಬೂರೆ' ಎಂದು ಆಚರಿಸುತ್ತಾರೆ. ನಸುಕು ಹರಿಯುವ ಮುನ್ನವೇ ಹೆಣ್ಣು ಮಕ್ಕಳ 'ನೀರು ತುಂಬುವ' ಶಾಸ್ತ್ರದೊಡನೆ ಆ ಹಬ್ಬ ಮೊದಲಾಗುತ್ತದೆ. ನೀರು ತುಂಬುವ ನೀರೆಯೊಬ್ಬಳ ಚಂದವನ್ನು ರಸಿಕನಾದ ಆಕೆಯ ಅಣ್ಣನ ಮಾತಿನಲ್ಲೇ ಕೇಳಿ:

ಸುತ್ತಿದ ಸೆರಗು ವ್ಯಾಲೆತ್ತಿದ ಕೈಗಳು
ಕುತ್ತಿಗೆ ಸರವೇ ಜೋಲಾಡಿ
ಕುತ್ತಿಗೆ ಸರವೇ ಜೋಲಾಡಿ ಗಂಗೆಯು
ನೆತ್ತೆತ್ತಿ ತಂಗಿ ದಣಿದಳು

ದಣಿದು ಮೇಲೆತ್ತಿದ ಗಂಗೆಗೆ ಗರತಿಪೂಜೆ ಸಲ್ಲಿಸಿ ಅನಂತರ ಹೆಣ್ಣು ಮಕ್ಕಳು ಅಭ್ಯಂಜನದ ಸಲುವಾಗಿ ಎಣ್ಣೆಯೊತ್ತಲು ಅಣಿಯಾಗುತ್ತಾರೆ. ಮೊತ್ತಮೊದಲು ಎಣ್ಣೆಯೊತ್ತಿಸಿಕೊಳ್ಳುವ ಭಾಗ್ಯ ಮನೆಯ ಅಳಿಯನದು:

ಕಂಚಿನ ಬಟ್ಟಲ ಮಿಂಚಿನೆಣ್ಣೆಯು ಕೊಂಡು
ಕೆಂಚೀರ್ಕೈವರು ತಳಿವರು

ಕೆಂಚೀರೈವರು ತಳಿವರಳಿಯನ ಮನೆಗೆ
ಸಂಚಿಸಿರಿ ತಾಯಿ ಬರಲೆಂದು

ಆದಾದಮೇಲೆ ಅಭ್ಯಂಜನ. ಅಭ್ಯಂಜನವೆಂದರೆ ಎಣ್ಣೆಹಚ್ಚಿ ಮೀಯುವುದಲ್ಲ; ಮಲೆನಾಡಿನ ಅಭ್ಯಂಜನ!

ಏಳು ಹಂಡೆ ನೀರು ಯಾಲಕ್ಕಿ ಪರಿಮಳ
ಎದ್ದೆದ್ದು ಮರಳಿ ಉಕ್ಯಾವು
ಎದ್ದೆದ್ದು ಮರಳಿ ಉಕ್ಯಾವಭ್ಯಂಗಕೆ
ಮುದ್ದಿನಳಿಯನ ಕರೆತನ್ನಿ

ಆ ಮುದ್ದಿನ ಅಳಿಯನನ್ನು ಕುದಿನೀರಿನ 'ಬಾನಿ' ಯಲ್ಲಿಳಿಸಿ ಮೇಲಿನಿಂದ ಎಡಬಿಡದೆ ಕುದಿನೀರೆರೆಯುತ್ತ ಎರಡು ತಾಸು ಹಣ್ಣು ಮಾಡಿದಮೇಲೆ, ಅವನನ್ನು ಕೈಗೊಟ್ಟು ಕರೆತಂದು ಬೆಂಕಿಯ ಎದುರು ಕಂಬಳಿ ಮುಚ್ಚಿ ಮಲಗಿಸುತ್ತಾರೆ. ಅಷ್ಟಾಗುವಾಗ,

ನೀರಿಲ್ಲದಂಗಳದಾಗೆ ನೀರ್ಯಾಂಗೆ ಹರಿದವು
ಪಾರಾಯರ ಮನೆಯ ಮಗ ಮಿಂದು
ಪಾರಾಯರ ಮನೆಯ ಮಗ ಮಿಂದಂಗಳದಾಗೆ
ನೀರಿನ ಹೊಳೆಯೇ ಹರಿದಾವು

....ಅಂದಿನ ರಾತ್ರಿಯ ವಿಶೇಷ ಕಾರ್ಯಕ್ರಮ 'ಬೂರೆಗಳುವು.' ಬೇರೆಡೆಗಳಲ್ಲಿ ಹೋಳಿಹುಣ್ಣಿಮೆಗಿರುವಂತೆ, ಮಲೆನಾಡಿನಲ್ಲಿ ಅಂದು ಕಳುವಿಗೆ ದೋಷವಿಲ್ಲ. ಮಾತ್ರ, ಚಾತುರ್ಯದಿಂದ ಕಳವುಮಾಡಬೇಕು. ಕದಿಯುವಾಗ ಒಡೆಯ ಕಂಡನೊ, ಆ ಕದ್ದಾತ ಅದರ ಮುಂದಿನ ದೀಪಾವಳಿಯ ವರೆಗೆ ಬದುಕುವುದಿಲ್ಲವಂತೆ! ಈ ಕಾರ್ಯಕ್ರಮದಲ್ಲಿ ಹಳ್ಳಿಯ ತರುಣರ ಉತ್ಸಾಹ ಹೇಳತೀರದು. ರಾತ್ರಿಯ ವೇಳೆ ಬೇಲಿ ಹಾರಿ ತೋಟಕ್ಕೆ ಧುಮುಕಿ 'ಎಳೆನೀರು' ಇಳಿಸುವ ಸಾಹಸದ ಕಥೆಗಳನ್ನು ಹೇಳುತ್ತಹೋದರೆ ನೂರು ಇದ್ದೀತು! ನಿತ್ಯದ ನೀತಿಗೆ ಆಡಿಕೆ ದೊರೆತಿರುವ ಅಂದಿನ, ಒಂದೊಂದು ಕಥೆಯೂ ಮೆಯ್ ನವಿರೇಳಿಸುತ್ತದೆ.

ದೀಪಾವಳಿಯ ಮತ್ತೊಂದು ಕಾರ್ಯಕ್ರಮ ಬಲೀಂದ್ರನ ಪೂಜೆ. ಈ ಪೂಜೆ ಸಾರ್ವತ್ರಿಕವಾದುದಲ್ಲ. ಊರಿನ ಕೆಲವು ಮನೆತನಗಳವರು ಮಾತ್ರ ಬಲೀಂದ್ರನನ್ನು ಮನೆದುಂಬಿಸುತ್ತಾರೆ........ಕಾರ್ಗಾಲದ ಜಡದಿನ

ಗಳನ್ನು ನರಕದ ಕತ್ತಲರಮನೆಯಲ್ಲಿ ಕಳೆದ ಬಲಿಚಕ್ರವರ್ತಿ ಅಂದು, ಕಾರ್ತೀಕದ ಎದುರಿನ ಹಿತವಾದ ಸುಂದರ ರಾತ್ರಿಯಲ್ಲಿ, ಮೇಲೇರಿ ಮರ್ತ್ಯಕ್ಕೆ ಬರುತ್ತಾನೆ.

ಚೆಲುವ ಬಲೀಂದ್ರರಾಯ ಬಲಗೊಂಡು ಬರೊ ಮುನ್ನ
ಕಲ್ಲಿನ ಮಳೆಯೇ ಸುರಿದಾವು
ಕಲ್ಲಿನ ಮಳೆಯೇ ಸುರಿದಾವು ನಮ್ಮೂರ
ಹುಲ್ಲು ಹಸಿರೆಲ್ಲ ಚಿಗಿತಾವು
ಹುಲ್ಲು ಹಸಿರೆಲ್ಲ ಚಿಗಿತಾವು ಬಲಿರಾಯ
ದಯಮಾಡೊ ನಮ್ಮ ಮನೆಗಿಂದು

ಬಲಗೊಂಡು ಬಂದ ಬಲಿರಾಯನನ್ನು ಮನೆದುಂಬಿಸಿಕೊಂಡು ಭಕ್ತಿಯಿಂದ ಪೂಜೆ ಸಲ್ಲಿಸುವಾಗ, ಹಿತವಾದ ಆ ಶೀತಲರಾತ್ರಿಯಲ್ಲಿಯೂ:

ಅಪ್ಪ ಮಾಡೋ ಪೂಜೆ ಕಪ್ಪುರದ ಬೆಳಕೀಲಿ
ಅಪ್ಪ ಬಲಿರಾಯ ಕಿರುಬೆವತ
ಅಪ್ಪ ಬಲಿರಾಯ ಕಿರುಬೆವತ ತಮ್ಮಯ್ಯ
ಎತ್ತಿತ್ತಿ ಬೀಸೋ ಚವುರಿಯ

*   *   *   *

ಮಲೆನಾಡಿನ ಹಳ್ಳಿಗಳಲ್ಲಿ ದೀಪಾವಳಿಯ ಕಾರ್ಯಕ್ರಮಗಳಲ್ಲೆಲ್ಲ ಅತ್ಯಂತ ವರ್ಣರಂಜಿತವಾದದ್ದು ಪಾಡ್ಯಮಿಯ ದಿನದ ಗೋಪೂಜೆ. ಪ್ರಕೃತಿದೇವಿಗೂ ಆಕೆಯನ್ನು ಉಪಾಸನೆ ಮಾಡುವ ಈ ಭಕ್ತನಿಗೂ ನಡುವೆ ಪೂಜಾರಿಯಾಗಿ ನಿಂತು, ಮುಕ್ತಹಸ್ತಳಾದ ಆ ದೇವಿಯ ವರವನ್ನು ಈತನಿಗೆ ಸಂಪೂರ್ಣವಾಗಿ ದೊರಕಿಸಿಕೊಡುವವಳು ಗೋಮಾತೆ. ಇಂತಹ ತಾಯಿಯನ್ನು ವರ್ಷದಲ್ಲೊಮ್ಮೆ ಭಕ್ತಿಯಿಂದ ಪೂಜಿಸಿ ತನ್ನ ಋಣವನ್ನು ತುಸು ಹಗುರಮಾಡಿಕೊಳ್ಳುವ ಸುಸಂದರ್ಭವೊದಗಿದಾಗ ಆತ ಅದನ್ನು ಯೋಗ್ಯವಾಗಿ ಬಳಸಿಕೊಳ್ಳದೆ ಹೇಗೆ ಬಿಟ್ಟಾನು?

ಪಾಡ್ಯಮಿಯ ದಿನ ಬೆಳಗಾಗುವ ಹೊತ್ತಿಗೆ ದನಕರುಗಳನ್ನು ಮೆಯ್ ತೊಳೆದು ಶೃಂಗಾರಮಾಡಲು ತೊಡಗುತ್ತಾರೆ. ವಿಧವಿಧವಾದ ಹೂವು ಬಣ್ಣಬಾಸಿಗಗಳಿಂದ ಒಂದೊಂದನ್ನೂ ಅಲಂಕರಿಸುತ್ತಾರೆ. ಅನಂತರ ಗೋವಿನಪೂಜೆ ನಡೆಯುತ್ತದೆ. ಮನೆಮನೆಗಳಲ್ಲಿಯೂ ಪೂಜೆಯಾದ

ಮೇಲೆ ಊರಿನ ಎಲ್ಲ ದನಕರುಗಳೂ ಒಟ್ಟಿಗೆ ಮೆರವಣಿಗೆ ಹೊರಡುತ್ತವೆ. ಮಂಗಲವಾದ್ಯಘೋಷಗಳು ಮೊಳಗುತ್ತಿರಲು ಸಿಂಗಾರವಾಗಿ ಕೋಡಾಡಿಸುತ್ತ ಒಡ್ಡಾಗಿ ನಡೆಯುವ ಆ ದನಕರುಗಳ ಚಂದ ನೋಡಬೇಕು:

ಕವುಲೆ ಕವುಲೆ ನೂರು ಕವುಲೆಯ ಕರ ನೂರು
ದೀವಳಿಗೆಲೊಡ್ಡು ಹೊಂಟಾವು
ಎತ್ತು ಎತ್ತು ನೂರು ಎತ್ತಿನ ಹೋರಿ ನೂರು
ದೀವಳಿಗೆಲೊಡ್ಡು ಹೊಂಟಾವು

ಉತ್ಸವದ ಮುದದಲ್ಲಿ, ತನ್ನ ತಮ್ಮಯ್ಯನ ಮುದ್ದಿನ ಬಸವಣ್ಣ ಕೋಡಾಡಿಸುತ್ತ ಕುಣಿದೋಡುವ ಸೊಬಗನ್ನು ನೋಡಿ ಚೆಲುವೆಯೊಬ್ಬಳು ಪುಳಕಿತಳಾಗಿಬಿಟ್ಟಿದ್ದಾಳೆ:

ಚೆನ್ನ ಬಾಸಿಂಗ ತೊಟ್ಟು ಚೆನ್ನು ಬಾಲ ಕುಣಿಸಿ
ನನ್ನ ತಮ್ಮಯ್ಯನ ಬಸವಣ್ಣ
ನನ್ನ ತಮ್ಮಯ್ಯನ ಬಸವಣ್ಣ ಓಡಾಗ
ಚಿನ್ನದ ದುಗುಳೇ ಮುಸುಕ್ಯಾವು....
ನಕ್ಕರೆ ನಗುವಂಥ ಚಿಕ್ಕತಮ್ಮನ ಹೋರಿ
ಹಕ್ಕಿ ಹಾರಿದರೆ ಬೆದರೀತು
ಹಕ್ಕಿ ಹಾರಿದರೆ ಬೆದರೀತು ದೀವಳಿಗೆ
ಜಕ್ಕಾತಿ ಸದ್ದಿಗೆ ಚಿಗಿದೀತು....

....ಸಂಜೆ ಕಾಲಿಡುತ್ತಿರುವಂತೆ, ಬೈಗುಗೆಂಪಿಗೆ ಚಿನ್ನದ ಧೂಳೆರಚುತ್ತ ಊರಿನ ದನಕರುಗಳೆಲ್ಲ ಹಿಂದಿರುಗುತ್ತವೆ. ಅವು ಕೊಟ್ಟಿಗೆಗೆ ಕಾಲಿಡುವ ಮುನ್ನ, ದೃಷ್ಟಿ ಪರಿಹಾರವಾಗಲೆಂದು ಓಕುಳಿ ಸುಳಿದು ಚೆಲ್ಲುತ್ತಾರೆ. ಮನೆಯ ಹೆಣ್ಣುಮಕ್ಕಳು ಅವುಗಳನ್ನು ಬರಮಾಡಿಕೊಂಡು ಮೆಯ್‌ದಡವಿ,

ಸಂಜೆಯಾಯಿತು ನಮ್ಮ ಸೌಭಾಗ್ಯದ ಸಂಜೆ
ದನ ಬಂದು ಎತ್ತು ಕರ ಬಂದು
ದನ ಬಂದು ಎತ್ತು ಕರ ಬಂದು ನಮ್ಮನೆಗೆ
ಎಂದಿಲ್ಲದ ಭಾಗ್ಯ ಸಿರಿ ಬಂದು

ಎಂದು ಮುದಗೊಳ್ಳುತ್ತಾರೆ.

ರಾತ್ರಿ ಪುನಃ ಅವುಗಳ ಪೂಜೆ ನಡೆಯುತ್ತದೆ. ಅನಂತರ, ಮನೆ

ಮನೆಯಲ್ಲೂ ಬೀದಿಬೀದಿಗಳಲ್ಲೂ ಹಣತೆ ಪಂಜುಗಳು ಬೆಳಗಲಾರಂಭಿಸುತ್ತವೆ.

*   *   *   *

ಈ ಬೆಳಕಿನ ಹಬ್ಬದ ಬಾಗಿನವೆನ್ನುವಂತಿರುವ 'ದೀಪನೀಡುವ' ಅಥವಾ 'ಹಬ್ಬ ಹಾಡುವ' ಸಂಪ್ರದಾಯ ಮಲೆನಾಡಿನಲ್ಲಿ ಮಾತ್ರ ಕಾಣಬಹುದಾದ ವೈಶಿಷ್ಟ್ಯ.

ಬಲಿಪಾಡ್ಯಮಿಯ ರಾತ್ರಿ, 'ಸೀಮೆ'ಯ ಒಕ್ಕಲುಮಕ್ಕಳುಗಳೆಲ್ಲ ಕೂಡಿ ಸೀಮೆಯ ದೇವಸ್ಥಾನಕ್ಕೆ ಹೋಗುತ್ತಾರೆ. ಅಲ್ಲಿ ದೇವರಿಗೆ ಹಣ್ಣುಕಾಯಿ ಒಪ್ಪಿಸಿ, ದೇವರ ನಂದಾದೀಪದ ಕುಡಿಯಿಂದ ತಮ್ಮ ಹಣತೆಗಳನ್ನು ಹೊತ್ತಿಸಿಕೊಂಡು, ತಮ್ಮಲ್ಲಿ ಹತ್ತೆಂಟು ಜನಗಳ ಹಲವು ಗುಂಪುಗಳಾಗಿ ವಿಂಗಡಿಸಿಕೊಂಡು, ಒಂದೊಂದು ಭಾಗಕ್ಕೆ ಒಂದೊಂದು ಗುಂಪಿನಂತೆ ಹಬ್ಬ ಹಾಡಿ ದೀಪನೀಡಲು ಹೊರಡುತ್ತಾರೆ.

ದೀಪ ಕೊಂಡು ದೇವಾಲಯದಿಂದ ಹೊರಡುವ ವೇಳೆಗೆ ಸುಮಾರು ಮೂರು ತಾಸು ರಾತ್ರಿ ಕಳೆದಿರುತ್ತದೆ. ಅನಂತರ, ದಟ್ಟವಾದ ಕಾಡುಗಳ ನಡುವೆ ಮೊಳದಗಲದ ಕಾಲುದಾರಿಗಳಲ್ಲಿ–ದೀಪಹಿಡಿದ 'ಯಜಮಾನ' ಮುಂದಿರಲು ಉಳಿದ ಹಾಡುಗಾರರು ಮತ್ತು ಮೇಳ ಅವನನ್ನು ಹಿಂಬಾಲಿಸುತ್ತಿರುವಂತೆ–ಈ ದೀಪಧಾರಿಗಳ ಮೆರವಣಿಗೆ ಸಾಗುತ್ತದೆ. ಹಿಡಿದ ಹಣತೆ ಅಕ್ಕಪಕ್ಕದ ಗಿಡಮರಗಳ ಮೇಲೆ ಬೆಳಕು ಚೆಲ್ಲುತ್ತಿರಲು, ಕಂಪು ಗಿಡಿದ ತೆವಳುಗಾಳಿಯನ್ನೇರಿ ಇವರ ಹಾಡು ಸುತ್ತಣ ಕಾಡಿನಲ್ಲೆಲ್ಲ ಹೊಳಲಿಡುತ್ತದೆ :

ಕತ್ತಲೆ ಗಿಡಮಾಲು ಸುತ್ತು ಮಾವಿನ ಸಾಲು
ಎತ್ತೆತ್ತಲು ಬೆಳಕು ದವುಡಿಟ್ಟು
ಎತ್ತೆತ್ತಲು ಬೆಳಕು ದವುಡಿಟ್ಟು ಹಬ್ಯಾವು
ದೀಪದ ದಾರಿ ನೇರಾಗಿ....
ಕತ್ತಲೆ ಗಿಡಮಾಲು ಸುತ್ತು ಮಾವಿನ ಸಾಲು
ಎತ್ತೆತ್ತಲು ಹೂವ ಪರಿಮಳ
ಎತ್ತೆತ್ತಲು ಹೂವ ಪರಿಮಳ ಸೂಸ್ಯಾವು
ದೀಪದ ದಾರಿ ನೇರಾಗಿ....

ಕೆತ್ತಲೆ ಗಿಡಪಾಲು ಸುತ್ತುವ್ರ ವಿನಸಾಲು
ಎತ್ತೆತ್ತಲು ಹಾಡು ಮುರುದನಿ
ಎತ್ತೆತ್ತಲು ಹಾಡು ಮುರುದನಿಗೊಟ್ಟವು
ದೀಪದ ದಾರಿ ನೇರಾಗಿ....

ಕತ್ತಲೆ ಕವಿದರೇನು, ಕಾಡು ಮುಚ್ಚಿದರೇನು—ದೀಪದ ದಾರಿ ನೇರವೇ ಇರುತ್ತದೆ. ಆದರೆ, ದೀಪದ ದಾರಿ ನೇರವಿದ್ದರೂ ದೀಪ ಹಿಡಿದ ಮಾನವನ ದಾರಿ ನೇರವಲ್ಲ ಎನ್ನುವಿರೇನು ?

ಕಲ್ಲುಮುಳ್ಳಿದ್ದರೆ ಹುಲ್ಲಂತ ತಿಳಿದೇವು
ಸೊಲ್ಲೇರಿಸಿ ಹಾಡಿ ನಡೆದೇವು
ಸೊಲ್ಲೇರಿಸಿ ಹಾಡಿ ನಡೆದೇವು ಭಗವಂತ
ಸುಳ್ಯಾಡೆವು ದಾರಿ ಬಿರುಸಂತ....

....ಹಾಡು ಹೊಳಲಿಡುವ ಕಾಡು ಹಿಂದಕ್ಕೆ ಸರಿಯುತ್ತಿರಲು, ಗುಡ್ಡ ಏರಿ ಗುಡ್ಡ ಇಳಿದು ಈ ದೀಪನೀಡುವ ಮಂದಿ ಊರು ಸೇರುತ್ತಾರೆ. ಮನೆಯ ಬಾಗಿಲಲ್ಲಿ ನಿಂತು ಒಕ್ಕೊರಲಿನಲ್ಲಿ ಕೂಗುತ್ತಾರೆ :

ದೀಪ ದೀಪ ದೀವಳಿಗೆ
ಜೋಳಿಗೆ ತುಂಬ ಹೋಳಿಗೆ

ಇದೇ ಅವರು ಬಂದ ಸೂಚನೆ.

ಒಡನೆಯೇ ‘ ಬಾಗಿಲು ತೆಗೆಸುವ ಹಾಡು ’ ಆರಂಭವಾಗುತ್ತದೆ :

ಬಾಗಿಲು ಬಾಗಿಲು ಚಂದ ಈ ಮನೆ ಬಾಗಿಲು ಚಂದ
ಬಾಗಿಲ ಮ್ಯಾಲೇನ ಬರೆದಾರೆ
ಬಾಗಿಲ ಮ್ಯಾಲೇನ ಬರೆದಾರೆ ಸಿರಿಕಾನ
ಕೊಚ್ಚು ಪಾಲುಣ್ಣುವ ನವಿಲ್ಹಿಂಡು........
ಕದಕಿಂತ ಕದ ಚಂದ ಈ ಮನೆಯ ಕದ ಚಂದ
ಕದದ ಮ್ಯಾಲೇನ ಕೊರೆದಾರೆ
ಕದದ ಮ್ಯಾಲೇನ ಕೊರೆದಾರೆ ಸಾಲಾಗಿ
ಕಿವಿಯೆತ್ತಿ ನಿಂತ ಮಿಕ ಹಿಂಡು........
ಅಂದನುಳ್ಳರ ಮನೆಗೆ ಚಂದನುಳ್ಳ ಕದವು
ಚಂದನುಳ್ಳ ಕದಕೆ ಚಿನ್ನದ
ಚಂದನುಳ್ಳ ಕದಕೆ ಚಿನ್ನದ ಚಿಲುಕವು
ಚಂದಿರನಂಥಯ್ಯ ತೆಗೆ ಬನ್ನಿ

ಚಂದ್ರಮನಂತೆ ಚೆಲುವು ಸೂಸುವ ಮನೆಯ ಒಡೆಯನನ್ನು ಬಾಗಿಲು ತೆರೆಯುವಂತೆ ಕೇಳಿ, ತಮ್ಮ ಶ್ರಮವನ್ನು ಸೂಚಿಸಿ, ದೀಪ ಕೊಳ್ಳುವಂತೆ ಬೇಡುತ್ತಾರೆ :

ಮುಳ್ಳಾಗೆ ಕಲ್ಲಾಗೆ ಬಂದೇವಯ್ಯ
ತಂದೇವೀ ದೀಪಾನ ಕೊಳ್ಳೀರಯ್ಯ
ಕತ್ತಲು ಹಾದ್ಯಾಗೆ ಬಂದೇವಯ್ಯ
ತಂದೇವೀ ದೀಪಾನ ಕೊಳ್ಳೀರಯ್ಯ
ಗುಡ್ಡ ಬೆಟ್ಟ ಹತ್ತಿ ಬಂದೇವಯ್ಯ
ತಂದೇವೀ ದೀಪಾನ ಕೊಳ್ಳೀರಯ್ಯ

ಜೊತೆಗೆ,

ಬಾಗಿಲು ತೆಗೆದ ಕೈಗೆ ಭಾಗ್ಯದ ಮಳೆ ಬಂದು
ದೀಪ ಕೊಂಡರಿಗೆ ದೊರೆಪದವಿ
ದೀಪ ಕೊಂಡರಿಗೆ ದೊರೆಪದವಿ ದೊರೆಯಲಿ
ದೀಪದೇವರ ಕರುಣರಲಿ

ಎಂದು ಹಾರೈಸುತ್ತಾರೆ.

........ಈ ವೇಳೆಗೆ ಬಾಗಿಲು ತೆರೆದಿರುತ್ತದೆ. ಮನೆಯವರೆಲ್ಲ ಹೊರಗೆ ಬಂದು ದೀಪವನ್ನು ಬರಮಾಡಿಕೊಳ್ಳುತ್ತಾರೆ. ದೀಪಕ್ಕೆ ಕಾಸು ಹಾಕಿ ಅದ ರಿಂದ ಒಂದು ಕುಡಿಯನ್ನು ಕೊಂಡು, ಮನೆಯೊಳಕ್ಕೆ ಹಚ್ಚಿಟ್ಟುಕೊಳ್ಳುತ್ತಾರೆ. ಅನಂತರ, ದೀಪದ ಪದಗಳನ್ನು ಕೇಳಲು ಅಣಿಯಾಗಿ ಕುಳಿತುಕೊಳ್ಳುತ್ತಾರೆ.

............ಮಧ್ಯ ರಾತ್ರಿ ಸಮೀಪಿಸುವ ಇಲ್ಲವೇ ಮೀರಿರುವ ಕಾಲ. ಸುತ್ತ ಎಲ್ಲೆಲ್ಲಿಯೂ ಗಂಭೀರ ನೀರವ. ಜಗತ್ತೆಲ್ಲ ಕತ್ತಲೆಯ ಕಡಲಾಳದಲ್ಲಿ ಯಾವುದೋ ಮಾಂತ್ರಿಕನ ಗಾರುಡಿಗೆ ಮರುಳಾಗಿ ಅರೆನಿದ್ದೆಗೆ ಸಂದಂತೆ ಭಾಸವಾಗುತ್ತಿರುತ್ತದೆ. ಕುಳಿತು ಕೇಳುವವರಿಗೆ ಅರೆಯೆಚ್ಚರು. ಹಗಲೆಲ್ಲ ಹಬ್ಬದ ಸಂಭ್ರಮದಲ್ಲಿ ಎಷ್ಟು ಬಳಲಿಕೆಯಾಗಿದ್ದರೂ ಆಗ ತೋರದೆ, ಈಗ ಮೆಯ್ಯೆಲ್ಲ ಯಾವುದೊ ಮೆಲು ಅಮಲಿನ ಸೆರೆಯಲ್ಲಿರುವಂತೆ ತೋರುತ್ತದೆ. ಮೆಲು ಬಳಲಿಕೆಗೆ ಮೃದುವಾದ ಮಾದಕತೆಯನ್ನು ಸಿಂಪಡಿಸುವ ಗಾಳಿ ಬೀಸಿ........ಈ ನಡುವೆ, ಮಂತ್ರಮುಗ್ಧವಾದ ಮನಸ್ಸಿನೆದುರು ಚಿತ್ರ ವಿಚಿತ್ರ ವಾದ ನೂತನ ಸೃಷ್ಟಿಯೊಂದು ಮೂಡುವಂತೆ, ಅವರಲ್ಲಿ ನಾಲ್ಕಾರು ಜನ

ರಾಗವಾಗಿ ಸಾವಧಾನವಾಗಿ ಹಾಡನ್ನು ಮೊದಲುಮಾಡುತ್ತಾರೆ ; ಮತ್ತೆ ನಾಲ್ಕು ಜನ ಪಲ್ಲವಿ ಹೆಣೆಯುತ್ತ ಹೋಗುತ್ತಾರೆ.

........ಈಗ ಮನೆಯ ತಾಯಿ ಬಂದು ದೀಪಕ್ಕೆ ಎಣ್ಣೆಯೆರೆಯಬೇಕು :

ಸಾಲೆ ಸೀರೆನುಟ್ಟು ಸರಪ ಮುತ್ತನೆ ಕಟ್ಟಿ
ಮುಮ್ಮಾಳಿಗೆಯೊಳಗೆ ಸುಳಿವರು
ಮುಮ್ಮಾಳಿಗೆಯೊಳಗೆ ಸುಳಿವ ತಾಯವ್ವ ನಿಮ್ಮ
ವಾಲೆ ಬೆಳಕಾಗೆ ಮಗನೆದ್ದು
ವಾಲೆ ಬೆಳಕಾಗೆ ಮಗನೆದ್ದು ಜೋಗುಳ ಪಾಡಿ
ಜ್ಯೋತಿಗೆಣ್ಣೆಯನೆರೆ ಬನ್ನಿ
ಪಟ್ಟೆ ಸೀರೆನುಟ್ಟು ಬಟ್ಟು ಮುತ್ತನೆ ಕಟ್ಟಿ
ಮುತ್ತಿನ ಮ್ಯಾಲೆ ಸುಳಿವರು
ಮುತ್ತಿನ ಮ್ಯಾಲೆ ಸುಳಿವ ತಾಯವ್ವ ನಿಮ್ಮ
ಬಂದಿ ಬೆಳಕಾಗೆ ಮಗನೆದ್ದು
ಬಂದಿ ಬೆಳಕಾಗೆ ಮಗನೆದ್ದು ಜೋಗುಳ ಪಾಡಿ
ಜ್ಯೋತಿಗೆಣ್ಣೆಯನೆರೆ ಬನ್ನಿ
ಎಣ್ಣೆಯನೆರೆದರೆ ಪುಣ್ಯವು ನಿಮಗಾದಾವು
ಮುಂದೆ ಶಿವನೊರಿಗೊಂದರಿಕ್ಯಾಗಿ
ಮುಂದೆ ಶಿವನೊರಿಗೊಂದರಿಕ್ಯಾದ ಕಾರಣದಿಂದ
ಆನಂದನುಗಾಲ ಸುಖಿಬಾಳಿ............

ಪಟ್ಟೆಸೀರೆಯನ್ನುಟ್ಟು ಬಟ್ಟುಮುತ್ತು ಕಟ್ಟಿದ ತಾಯಿ, ತನ್ನ ಬಂದಿಯ ಬೆಳಕು ಹೊಳೆದು ಎಚ್ಚರುಗೊಂಡ ಮಗುವನ್ನು ಜೋಗುಳ ಹಾಡಿ ಮಲಗಿಸಿ, ವಾಲೆಯ ಬೆಳಕು ನೆರಳಾಡಿಸುತ್ತಿರಲು ಬಂದು ದೀಪಕ್ಕೆ ಎಣ್ಣೆಯೆರೆಯುತ್ತಾಳೆ. ದೀಪ ಪ್ರಜ್ವಲಿಸುತ್ತದೆ. ಉಸಿರೇರಿ ಉರಿಯುವ ದೀಪದ ಕೂಡ ಅವರು ಉಸಿರೇರಿಸಿ ಹಾಡತೊಡಗುತ್ತಾರೆ :

ಬೆಳ್ಳಿ ಬೆಟ್ಟದಮ್ಯಾಲೆ ಗೌರಿಯು ತೊಡೆ ದಿಂಬು
ಕಾಲು ಬಸವಯ್ಯನ ಹೆಗಲಿಗೆ
ಕಾಲು ಬಸವಯ್ಯನ ಹೆಗಲಿಗೆ ಸಾಚಿಕೊಂಡು
ಲೋಲ ಶಿವರಾಯ ಒರಗ್ಯಾರು
ಲೋಲ ಶಿವರಾಯ ಒರಗ್ಯಾರು ತಮ್ಮೆಡೆಯ
ದೀಪವೆ ದೂರ ನಡೆಯೆಂದು

ಜೂರ ನಡೆಯೆಂದು ಮುರುತ್ಯಕಿಳಿದ ದೀಪ
ಆನಂದನುಗಾಲ ಸುಖಿಬಾಳಿ
ಆನಂದನುಗಾಲ ಸುಖಿಬಾಳಿ ಶಿವರಾಯನ
ದೀವಳಿಗೆ ದೀಪೇ ನಡೆ ಮುಂದೆ

—ದೀಪದ ಹಾಡುಗಳ ಪೀಠಿಕೆಯಿಷ್ಟು ಮುಗಿದಮೇಲೆ ಇನ್ನಿತರ ಕಥೆಯ ಹಾಡುಗಳು ಮೊದಲಾಗುತ್ತವೆ. ಹಾಡು ಆರಂಭವಾಗುವ ಮುನ್ನ ಹಾಡುಗಾರರು ಒಂದು ಗುಂಪಿನಲ್ಲೂ ಪಲ್ಲವಿ ಹೆಣೆಯುವವರು ಮತ್ತೊಂದು ಗುಂಪಿನಲ್ಲೂ ನಿಲ್ಲುತ್ತಾರೆ. ಪಲ್ಲವಿ ಕೂಡಿಸುವುದರಲ್ಲಿಯೂ ಅದೆಷ್ಟು ಬಗೆಯ ಚಾತುರ್ಯ ! ಹಲವೊಮ್ಮೆ—

ಸೋಮುಸಾಲ್ಯಾಗೆ ಇರು ಮಗಳೆ ನಾ ನಿನ್ನ
ಮಾರಾಯರ ಮನೆಗೆ ಕೊಡತೇನೆ

ಎಂದು ಒಂದು ಗುಂಪು ಕಥೆಯನ್ನು ಮುಂದುವರಿಸಿದರೆ, ಇನ್ನೊಂದು ಗುಂಪು ಪಾದ ಪಾದಕ್ಕೂ,

ಹುಟ್ಟುತ್ಹುಟ್ಟುತ ಗೌರಿ ಹೂವಿನ ಕೋಲನ್ಹಿಡಿದು
ಸುತ್ಯಾಡತಾಳೆ ಗೆಣತೇರ ಕೂಡ್ಯಾಡಿ

ಎಂದು ಕಥೆಯ ಆರಂಭದ ಸಾಲುಗಳನ್ನು ಬೆಸೆಯುತ್ತ ಹೋಗುತ್ತಾರೆ.

ಕೆಲವೊಮ್ಮೆ ಒಂದು ತಂಡ—

ಭತ್ತವ ಬಿತ್ತಿದರೆ ಭತ್ತನವರುಂಡಾರು
ಭತ್ತದ ಹುಲ್ಲ ನಮುಗ್ಹಾಕಿ

ಎಂದು ಕಥೆಯ ಸಂಭಾಷಣಪಾದವನ್ನು ಹಾಡಿ ನಿಲ್ಲಿಸಿದರೆ, ಇನ್ನೊಂದು ತಂಡ, ಸಂಭಾಷಣೆಯನ್ನು ಮುಂದುವರಿಸುತ್ತ ವಾಕ್ಯಕ್ಕೆ ಪ್ರತಿವಾಕ್ಯವಾಗಿ,

ಭತ್ತದ ಹುಲ್ಲು ನಿಮುಗ್ಹಾಕಿ ಸಾಕಿದರೂ
ಸೀನ್ಹೋಗಿ ಸಲಹೋ ಮರುತ್ಯಾವ

ಎಂದು, ಕಥೆಯನ್ನು ಒಟ್ಟೊಟ್ಟಿಗೆ ಮುಂದುವರಿಸಿಕೊಂಡು ಹೋಗುವುದಿರುತ್ತದೆ.

ಮತ್ತೆ ಹಲವೊಮ್ಮೆ, ಒಂದು ಗುಂಪಿನವರು ಕಥೆಯ ಒಂದು ನುಡಿ ಹೇಳಿದಾಗ ಮತ್ತೊಂದು ಗುಂಪಿನವರು ಕಥೆಗೆ ಸಂಬಂಧವೇ ಇರದ ಬೇರೊಂದು ‘ ಬಿಡುನುಡಿ ’ ಯನ್ನು ಹೆಣೆದು ಸಾಗಿಸುವುದುಂಟು.

ಸ್ವಾಮಿಯೊಂದು ಪಟ್ಟೆನುಡುವರು
ಮ್ಯಾಲೊಂದು ಕವಚ ತೊಡುವರು
ಸ್ವಾಮಿಯೊಂದು ಕವಚ ತೊಡುವರು
ಮ್ಯಾಲೊಂದು ಪದಕನಿಡುವರು

—ಎಂದು ಒಂದು ಪಂಗಡದವರು ಹೇಳಿದಾಗ, ಮತ್ತೊಂದು ಪಂಗಡದವರು,

ಏ ಗಿಣಿಯೇಗಿಣಿಯೇ—ಚಿನ್ನದ
ಸೋಗೆ ಬಣ್ಣದ ನವಿಲೇ

ಎಂದೋ, ಅಥವಾ—

ಚಪ್ಪರ ಹಾಕಲಿ ನನೆಕಟ್ಟು ಕಟ್ಟಲಿ
ಉತ್ತಮರಲ್ಲಿ ನೆರೆಯಲಿ

ಎಂದಾಗ,

ನೋಡು ನೋಡಂದಗಳ
ಸ್ಯಾವಂತಿಗ್ಹೂವಿನ ಚಂದಗಳ

ಎಂದೋ, ಹೊಂದಿಸುತ್ತ ರತ್ನಹಾರದ ಮಣಿಮಣಿಗಳ ನಡುವಿನ ಚಿನ್ನದ ಕಡ್ಡಿಯ ಸೊಗಸನ್ನು ನೆನಪಿಗೆ ತಂದುಕೊಡುತ್ತಾರೆ.

ಇನ್ನು, ಅವರ ಕಥೆಯ ಹಾಡುಗಳೋ!—ದೀವಳಿಗೆಯ ಇರುಳಿನಲ್ಲಿ ದೀಪಹಿಡಿದು ಬರುವ ಆ ಜಾನಪದ ದೀಪಧಾರಿಗಳ ಮಾಯಕದ ಜೋಳಿಗೆಯಲ್ಲಿ ಅದೆಷ್ಟು ಚಿತ್ರವಿಚಿತ್ರವಾದ ಸರಕುಗಳಿರುತ್ತವೆ! ಒಂದು ಸೊಲ್ಲು ಎತ್ತಿ ಆ ಜೋಳಿಗೆಯ ದಾರವನ್ನು ಎಳೆದರಾಯಿತು, ಬಣ್ಣ ಬಣ್ಣದ ಯಕ್ಷಲೋಕವೇ ಕಣ್ಣೆದುರು ನಲಿಯತೊಡಗುತ್ತದೆ.

............ಒಂದೊಂದು ಮನೆಯಲ್ಲೂ ಮೂರು ನಾಲ್ಕು ಪದಗಳನ್ನು ಹೇಳಿ, ಮನೆಯಿಂದ ಮನೆಗೆ ಸಾಗುತ್ತಾರೆ ಈ ಜಂಗಮ ದೀಪಧಾರಿಗಳು. ಮನೆ ಮನೆಯಲ್ಲೂ ಅವರಿಗೆ ಹಣದ ಹಾಗೂ ಹಬ್ಬದ ಭಕ್ಷ್ಯಗಳ ಕಾಣಿಕೆ ಸಲ್ಲುತ್ತದೆ. ಹೀಗೆಯೇ, ಪಾಡ್ಯಮಿಯ ರಾತ್ರಿಯಿಂದ ಮೊದಲಾಗಿ ಮೂರು ರಾತ್ರಿಗಳ ಪರ್ಯಂತ ಈ ದೀಪದ ಜಾತ್ರೆ ಸಾಗುತ್ತದೆ.

*  *  *  *

ಮುಂದಿನ ಬರೆಹಗಳಲ್ಲಿ ಆ ಜ್ಯೋತಿಪುರೋಹಿತರ ಕೆಲವು ರಮ್ಯ ಗೀತಿಕೆಗಳನ್ನು ಪರಿಚಯ ಮಾಡಿಕೊಳ್ಳೋಣ. ಸುಮನಸ್ಕರಾಗಿ, ಇರುಳಿನ

ಮಾಯೆಯನ್ನು ಆವಾಹಿಸಿಕೊಂಡು ಸಿದ್ಧರಾಗಿ. ಸಾವಧಾನದಿಂದ ರಸ ಹೀರುತ್ತ ನಡೆಯಿರಿ. ನಿಮ್ಮಲ್ಲಿನ ಭಾವಸಂಸ್ಕೃತಿ ಎಚ್ಚರಗೊಳ್ಳಲಿ. ನಿಮ್ಮಲ್ಲಿ ಪ್ರೇಮ ಮೂಡಲಿ; ನಿಮಗೆ ಆನಂದ ದೊರೆಯಲಿ........ಇನ್ನು ಕೇಳಿ :

ಮುಳ್ಳಾಗೆ ಕಲ್ಲಾಗೆ ಬಂದೇವಯ್ಯ
ತಂದೇವೀ ದೀಪಾನ ಕೊಳ್ಳೀರಯ್ಯ........

---

# ೨. ಸತ್ಹುಟ್ಟೊ ಗಂಡನ್ನ ಒಲ್ಲೆ ಕಾಣೆ ತಾಯಿ

ವಿಶ್ವದ ಮಾತಾಪಿತೃಗಳಾದ ಶಿವದಂಪತಿಗಳನ್ನು ನಮಸ್ಕರಿಸಿ ಈಶ ಕಥೆಗಳ ಶ್ರವಣಕ್ಕೆ ಸಿದ್ಧರಾಗೋಣ.

ಇದು ಶಿವಪಾರ್ವತಿಯರ ಮಹಾಮಿಲನದ ಕಥೆ. ಅವರ ಕಥೆಯೇನು, ಸಮಸ್ತವಿಶ್ವದ ಅಖಂಡ ಕಥೆ. ಭಗವಂತನ ಲೀಲಾವಿನೋದಕ್ಕಾಗಿ ಅವನಿಂದಲೇ ಮೊದಲಾಗಿ ನಡೆಯುತ್ತಿರುವ ಜೀವದೇವರುಗಳ ವಿರಹಮಿಲನದ ಮಾಯಾಕ್ರೀಡೆಯ ಕಥೆ....

* * * *

ಹುಟ್ಟುತ್ಹುಟ್ಟುತ ಗೌರಿ ಹೂವಿನ ಸಿಬ್ಬಲನ್ಹಿಡಿದು
ಸುತ್ಯಾಡತಾಳೆ ಗೆಣತೇರ ಕೂಡ್ಯಾಡಿ
ಹುಟ್ಟುತ್ಹುಟ್ಟುತ ಗೌರಿ ಹೂವಿನಕೋಲನ್ಹಿಡಿದು
ಸುತ್ಯಾಡತಾಳೆ ಗೆಣತೇರ ಕೂಡ್ಯಾಡಿ

—ಚೆಲುವಿನ ಬೀಡಿನಲ್ಲೊಂದು ಸಿಂಗಾರದ ಗೂಡು. ಅದೇ ಗೌರಿ ಹುಟ್ಟಿದ ಹಳ್ಳಿ. ಅಲ್ಲಿನ ಸುಪ್ರಸಿದ್ಧ ಶ್ರೀಮಂತ ಮನೆತನವೊಂದರಲ್ಲಿ, ವಿಕ್ರಮನೂ ಸತ್ತ್ವಗುಣಶಾಲಿಯೂ ಆದ ತಂದೆ ಮತ್ತು ಸುಶೀಲೆಯೂ ಸದ್ಗುಣೆಯೂ ಆದ ತಾಯಿ–ಇವರ ಏಕಮಾತ್ರ ಪುತ್ರಿಯಾಗಿ ಗೌರಿ ಹುಟ್ಟಿದಳು. ಗೌರಿ ಹುಟ್ಟಿದಾಗ ಮನೆ ಆನಂದದಲ್ಲಿ ಮುಳುಗಿಹೋಯಿತು; ಗ್ರಾಮದಲ್ಲಿ ಸಂತಸದ ಹೊಳೆ ಹರಿಯಿತು. ಅಷ್ಟೇಕೆ, ಸರ್ವಸ್ಥಾವರ ಜಂಗಮಗಳೂ ಪರಿತೋಷಗೊಂಡಂತೆ ನಲಿದವು.

....ಹೂವಿನಂತಹ ಮಗು. ಹೂವಿನಂತಹ ದೇಹ. ಮಗು ಬೆಳೆಯುತ್ತ ಬಂದಂತೆ, ಅದರ ಮನಸ್ಸು ಹೂವಿಗಿಂತ ಕೋಮಲವಾಗಿ ಅರಳುತ್ತಿತ್ತು........ ಮಗು ಹರಿಯಲಾರಂಭಿಸಿದಾಗ ಮನೆಗೆ ಹರೆಯ ಬಂದಿತು. ಮಗು ತಪ್ಪುಹೆಜ್ಜೆಯಿಟ್ಟು ನಡೆದಾಗ ಮನೆಗೊಂದು ಹೂವಿನ ಬೀಸಣಿಗೆ ಬಂದಂತಾಯಿತು. ಮಗು ಓಡಾಡುತ್ತ ಆಡತೊಡಗಿದಾಗ, ಕಿಲಕಿಲ ನಗುವಾಗ ಮನೆ ಪುಷ್ಪವತಿಯಾಗಿ ಪರಿಮಳವತಿಯಾಗಿ ಕಂಗೊಳಿ

ಸಿತು....ಗೌರಿ ಊರಿನ ಸಮವಯಸ್ಸಿನ ಸಂಗಡಿಗರನ್ನು ಕೂಡಿ ಆಟವಾಡ ತೊಡಗಿದಳು. ಧೂಳಾಟ ಕಲ್ಲಾಟಗಳನ್ನು ಕಲಿಯಲೇ ಇಲ್ಲ ಗೌರಿ. ಶಿವನ ಭಕ್ತರ ಮನೆತನದಲ್ಲಿ ಹುಟ್ಟಿದ ಆ ಹುಡುಗಿಗೆ ಕಂಡ ಕಲ್ಲೆಲ್ಲವೂ ಶಿವನೇ ಆಗಿದ್ದಿತು....ಗೆಣತಿಯರನ್ನು ಕೂಡಿ ಊರಿನ ಸುತ್ತಣ ವನಗಳನ್ನೆಲ್ಲ ಸುತ್ತುತ್ತ ವಿಧವಿಧವಾದ ಹೂಗಳನ್ನಾಯ್ದು ತಂದು ತನ್ನ ಕಲ್ಲಿನ ಶಿವನಿಗೆ ಅರ್ಪಿಸಿ ಹಾಡುವುದೇ ಆಕೆಯ ನಿತ್ಯದ ಕೆಲಸ. ಮಗಳ ಹೂವಿನ ಆಟವನ್ನು ಕಂಡು ತಂದೆತಾಯಿಗಳು ಮೊದಲು ಹಿಗ್ಗಿದರು....ದಿನ ಕಳೆದವು. ಮಗುವಾಗಿದ್ದ ಗೌರಿ ಬಾಲಕಿಯಾದಳು. ಆದರೂ ಆಕೆಯ ಶೈಶವದ ಆಟ ಬಿಡಲಿಲ್ಲ. ಮಗಳ ಬಾಲಲೀಲೆ ತಂದೆತಾಯಿಗಳಿಗೆ ಸಂತೋಷ ಕೊಟ್ಟರೂ ಸಂಗಡ ಅವರಿಗೆ ಒಂದು ಕೊರಗು ಬೆಳೆಯತೊಡಗಿತ್ತು. ಮಗಳು ವಿದ್ಯೆ ಬುದ್ಧಿ ಕಲಿಯಬೇಕು, ಮನೆತನದ ಭಾಗ್ಯವನ್ನು ಬೆಳೆಸಬೇಕು—ಎಂಬುದು ಅವರ ಹಂಬಲ. ಆದರೆ :

ಮಾಯಿಕಾರರ ಮಗಳು ಮಂತ್ರಗಾರರ ಮಗಳು
ಮಾಯಾದರ ಮಗಳು ಕೂಡ್ಯಾಡಿ
ಮಾಯಾದರ ಮಗಳು ಕೂಡ್ಯಾಡಿ ಸಿರಿಗೌರಿ
ವಿದ್ಯಾಬುದ್ಧಿಗಳು ಕೆಡುತಾವೆ

ಮೊದಮೊದಲು, ಆಗೊಮ್ಮೆ ಈಗೊಮ್ಮೆ ಮೂಡುತ್ತಿದ್ದ ಈ ಕೊರಗು ತಂದೆತಾಯಿಗಳಲ್ಲಿ ದಿನ ಕಳೆದಂತೆ ಬೆಳೆಯತೊಡಗಿತು....ಎಂತಹ ಚೆಲುವೆಯಾದ ಮಗಳು. ಎಂತಹ ಸೂಕ್ಷ್ಮ ಹಾಗೂ ಕೋಮಲ ಬುದ್ಧಿ ಅವಳದು. ಇಂತಹ ಹುಡುಗಿ ವಿದ್ಯೆ ಕಲಿಯುವುದನ್ನು ಬಿಟ್ಟು, ತಮ್ಮ ಮನೆತನವನ್ನು ಬೆಳಗಿಸುವ ಸೂಚನೆಯನ್ನೇ ತೋರದೆ, ಹೀಗೆ ಗೆಣತಿಯರೊಂದಿಗೆ ಸದಾ ಆಟವಾಡುತ್ತ ಕುಳಿತುಬಿಡುವುದೆ? ಗೆಣತಿಯರಾದರೂ ಯಾರು? ಶ್ರೀಮಂತರಲ್ಲ, ಮನೆತನಸ್ಥರಲ್ಲ. ಬೀದಿಮಕ್ಕಳ ಗೆಣೆತನ ಯಾವ ಚಂದ, ಈ ಶ್ರೀಮಂತ ಪುತ್ರಿಗೆ?.....ಐಶ್ವರ್ಯ ತುಂಬಿದ ಮನೆಯಲ್ಲಿ ಹುಟ್ಟಿ ಒಳ್ಳೆಯಬಟ್ಟೆ ತೊಡಬಾರದೆ? ತಂದಿಟ್ಟ ಬಟ್ಟೆಗಳನ್ನೆಲ್ಲ ಮನೆಯಲ್ಲಿ ಬಚ್ಚಿಟ್ಟು ಸಾಮಾನ್ಯವಾದ ಬಟ್ಟೆಗಳಲ್ಲಿ ದಾರಿಗುಂಟ ತಿರುಗಿದರೆ ತಮಗೆ ಅವಮಾನವಲ್ಲವೆ?....ಆದರೆ ಈ ಚೆಲುವೆಯನ್ನು ಹೇಗೆ ತಿದ್ದುವುದು? ಒಂದು ಮಾತು

ಒರಟಾದರೆ, ದನಿ ತುಸು ದೊಡ್ಡದಾಯಿತೆಂದರೆ ಈ ಕೋಮಲೆ ಕಂಪಿಸುತ್ತಾಳೆ. ಎಳೆಯ ಜೀವ, ಸೂಕ್ಷ್ಮಬುದ್ಧಿ....ಆಕೆಯನ್ನು ನೋಯಿಸಿ ತಮ್ಮ ಕರುಳಿಗೇ ಶೂಲ ಚುಚ್ಚಿಕೊಳ್ಳುವುದು ಲೇಸಲ್ಲ. ಇನ್ನೂ ಹುಡುಗಾಟಿಕೆ; ವಯಸ್ಸು ಬಂದಂತೆಲ್ಲ ಸರಿಯಾಗಬಹುದು ಎಂದು ತಮ್ಮಲ್ಲಿಯೇ ಸಮಾಧಾನ ಮಾಡಿಕೊಂಡರು ಅಪ್ಪಅಮ್ಮಂದಿರು.

....ಹೀಗೆಯೇ ದಿನ ಕಳೆಯುತ್ತದೆ. ಗೌರಿ ಬಾಲ್ಯಕಳೆದು, ಮೆಯ್ ತುಂಬಿ, ಯೌವ್ವನದ ಹೊಸ್ತಿಲಲ್ಲಿ ಅಡಿಯಿಡುತ್ತಾಳೆ. ಅಂದವಾಗಿ ಎದೆಯೆತ್ತರ, ತುಂಬಿ ಬೆಳೆದು ನಿಂತಿರುವ ಮಗಳ ಚೆಲುವು ತಂದೆತಾಯಿಯರಿಗೇ ವಿಸ್ಮಯವನ್ನುಂಟುಮಾಡುತ್ತದೆ. ಲೋಕದ ಮೇಲೆ ಕಾಣದ ಈ ಅಸಾಧಾರಣ ಸೌಂದರ್ಯ ತಮ್ಮ ಮನೆಗೆ ಹೇಗೆ ಅವತರಿಸಿತು? ಶಿವನಕೃಪೆ!.... ಆದರೆ ಶಿವನಕೃಪೆ ಸರ್ವತೋಮುಖವಾಗಿ ಹರಡಲಿಲ್ಲ. ಆಕೆಯ ಬಾಲ್ಯದ ನಡವಳಿಕೆ ಯೌವ್ವನ ತುಂಬಿದರೂ ಬದಲಾಗಲಿಲ್ಲ. ಅದೇ ಗೆಳೆತನ, ಅದೇ ಆಟ, ಅದೇ ಶಿವಪೂಜೆ. ಶಿವಪೂಜೆ ಲೇಸು. ಆದರೆ ಅದಕ್ಕೊಂದು ಗಾಂಭೀರ್ಯ ಬೇಡವೆ?....ಬೇರೆ ಉಪಾಯಕಾಣದೆ, ಒಂದು ದಿನ, ತಂದೆ ಮಗಳನ್ನು ಸನಿಹದಲ್ಲಿ ಕುಳ್ಳಿರಿಸಿಕೊಂಡು ತಲೆಯನ್ನು ನೇವರಿಸಿ ತಮ್ಮ ಮಾತಿನ ಪೀಠಿಕೆಯನ್ನಾರಂಭಿಸುತ್ತಾರೆ:

ಪಟ್ಟೆಯನುಡು ಮಗಳೆ ಬಟ್ಟು ಮುತ್ತುಕಟ್ಟೆ ಮಗಳೆ
ಸೋಮಸಾಲ್ಯಾಗೆ ಇರು ಮಗಳೆ
ಸೋಮಸಾಲ್ಯಾಗೆ ಇರು ಮಗಳೆ ನಾ ನಿನ್ನ
ಉತ್ತಮರ ಮನೆಗೆ ಕೊಡತೇನೆ

ಮದುವೆಯ ಸುದ್ದಿ ಹೇಳಿದರೆ ಆಕೆಯ ವಯಸ್ಸಿನ ಕಲ್ಪನೆಯಾದರೂ ಆದೀತು. ಮುಂದೆ ಬರುವ ಹೊಣೆಗಾರಿಕೆಯ ಸೂಚನೆಯಾದರೂ ಹೊಳೆದೀತು. ಹರೆಯದ ಹೆಣ್ಣಿಗೆ ಉತ್ತಮನಾದ ಗಂಡನ ಆಸೆ ತೋರಿಸಿ ತಿದ್ದಬಹುದು—ಎಂದು ಯೋಚಿಸಿ ತಂದೆ ಹೇಳಿದರು. ಇದಕ್ಕೆ ಗೌರಿಯ ಉತ್ತರ?....

ಸತ್ತು ಹುಟ್ಟೊ ಗಂಡನ್ನ ಒಲ್ಲೆ ಕಾಣಪ್ಪಯ್ಯ
ಸೃಷ್ಟಿನಾಳುವ ಶಿವರಾಯ

ಸೃಷ್ಟಿನಾಳುವ ಶಿವರಾಯಗೆ ಕೊಟ್ಟರೆ
ಮುತ್ತಿನ ಮುಡಿದಂತೆ ಮುಡಿದೇನು

ಉತ್ತರ ಕೇಳಿ ತಂದೆ ಆಶ್ಚರ್ಯಚಕಿತರಾಗುತ್ತಾರೆ. ಅಬ್ಬ! ಎಂತಹ ಹುಡುಗಿ! ಈ ಚಿಕ್ಕವಯಸ್ಸಿನಲ್ಲೂ ಎಂತಹ ಹಿರಿತನದ ಮಾತು. ಅವರಿವರ ಕೂಡ, ನಾಯಾದರ ಮಕ್ಕಳ ಕೂಡ ಆಡುವ ಮುಗ್ಧ ಹುಡುಗಿಯೇ ಈಕೆ? ಇಂತಹ ದಿವ್ಯ ಹಂಬಲ ತನ್ನಂತಹ ಹಿರಿಯುನಿಗಾದರೂ ಬಂದೀತೇನು? ....ಆದರೆ, ನಿಜ, ಆದರೆ....ಒಂದು ರೀತಿಯಲ್ಲಿ ಅದು ಹಿರಿತನವಾದರೂ ಮತ್ತೊಂದು ರೀತಿಯಲ್ಲಿ ಹುಡುಗಾಟಿಕೆ!....ಶಿವನನ್ನು ವರಿಸುವುದು ಎಂದಾದರೂ ಸಾಧ್ಯವೆ? ಹಂಬಲ ಎಷ್ಟು ಉನ್ನತವಾಗಿದ್ದರೇನು, ಲೌಕಿಕವನ್ನು ಬಿದು ಮರ್ತ್ಯರು ಬದುಕುವುದೆಂತು? ಆ ಬೆಳ್ಳಿಯ ಬೆಟ್ಟದ ಒಡೆಯನೆಲ್ಲಿ? ಈ ಮರ್ತ್ಯಲೋಕದ ತನ್ನ ಮಗಳೆಲ್ಲಿ? ತನ್ನ ಢಮರುಗದ ಅಲ್ಪಘೋಂಕೃತಿ ಮಾತ್ರದಿಂದ, ಜಗತ್ತನ್ನೆ ರಂಗಸ್ಥಲಮಾಡಿ ಕುಣಿಯುವ ರುದ್ರನಾಟ್ಯದ ಒಂದು ಹೆಜ್ಜೆಯಿಂದ– ಸಮಸ್ತಲೋಕಗಳ ಪ್ರಳಯಕ್ಕೆ ಕಾರಣನಾಗಬಲ್ಲ ಆ ಮೂಲೋಕದೊಡೆಯ ಮುಕ್ಕಣ್ಣನೆಲ್ಲಿ? ಈ ತನ್ನ ಮುಗ್ಧ ಬಾಲಿಕೆ ಎಲ್ಲಿ? ಎಲ್ಲಿಯ ನಂಟು? ಎತ್ತಣ ಸಂಬಂಧ?....ತಂದೆ ಅಪ್ರತಿಭರಾದರು. ಯಾವುದು ಕರ್ತವ್ಯ ಯಾವುದು ಅಕರ್ತವ್ಯ ಎಂಬ ಬಗೆಗೆ ತಮ್ಮಲ್ಲಿಯೇ ಒಂದು ನಿರ್ಧರ ಬಾರದು....ಇನ್ನೇನು ನಿರ್ಧಾರ ಬಾರದಿದ್ದರೂ ಒಂದು ನಿಶ್ಚಿತ: ಇಂತಹ ಹಂಬಲ ಮನುಷ್ಯರಿಗೆ ಅಸಹಜ....ತಂದೆ ಮತ್ತೆ ಈ ಕುರಿತು ಮಗಳೊಡನೆ ಮಾತನಾಡಲಿಲ್ಲ. ಮಗಳ ಮಾತಿನಿಂದ ತಂದೆ ಯೋಚನೆಯಲ್ಲಿ ಮುಳುಗಿದ್ದರೆ, ತಾಯಿ ದಿಗಿಲುಗೊಂಡರು. ತಾನೂ ಒಮ್ಮೆ ಪ್ರಯತ್ನಿಸುವುದೆಂದು ಮಗಳ ಎದುರು ಅದೇ ಮಾತನ್ನು ಪ್ರಸ್ತಾಪಿಸಿದರು:

ಸಾಲೆನುಡು ಮಗಳೆ ಸರಮುತ್ತ ಕಟ್ಟು ಮಗಳೆ
ಚಂದ್ರಸಾಲ್ಯಾಗೆ ಇರು ಮಗಳೆ
ಚಂದ್ರಸಾಲ್ಯಾಗೆ ಇರು ಮಗಳೆ ನಾ ನಿನ್ನ
ಮಾರಾಯರ ಮನೆಗೆ ಕೊಡುತೇನೆ

ತಂದೆ ಹೇಳಲಿ, ತಾಯಿ ಹೇಳಲಿ ಗೌರಿಯ ನಿರ್ಧಾರ ಒಂದೇ:

ಸತ್ತುಹುಟ್ಟೊ ಗಂಡನ್ನ ಒಲ್ಲೆ ಕಾಣೆ ತಾಯಿ
ಸೃಷ್ಟಿನಾಳುವ ಶಿವರಾಯ

ಸೃಷ್ಟಿನಾಳುವ ಶಿವರಾಯುಗೆ ಕೊಟ್ಟರೆ
ಬೆಂಡಿನ ತೊಂಡಿಲವ ಮುಡಿದೇನು

ತಾಯಿ ಮತ್ತೆ ಹೇಳಿದಳು, ರಮಿಸಿದಳು, ಕಣ್ಣೀರು ಕರೆದಳು. ಮುಂದೆ ಮಾತನಾಡಲು ಎಡೆ ಕಾಣದೆ ನಿಟುಸಿರುಬಿಟ್ಟು ನಡೆದಳು....ಈ ಹಟದ ಚೆಲುವೆಯನ್ನು ಕಟ್ಟಿಕೊಂಡು ಏನು ಮಾಡುವುದು? ಏನು ಹೇಳಿದರೇನು, ಹೆಣ್ಣಿಂದಮೇಲೆ ಮದುವೆ ಸಿದ್ಧ. ಒಂದಲ್ಲ ಒಂದು ದಿನ ಮದುವೆಯಾಗಿ ಗಂಡನ ಮನೆ ಸೇರಿ ಸಂಸಾರದೊಳಕ್ಕೆ ಧುಮ್ಮಿಕ್ಕಿದರೆ ತಾನೆ ಹಾದಿಗೆ ಬಂದಾಳು—ಎಂದು ತನ್ನಲ್ಲಿಯೇ ಸಾಂತ್ವನ ಮಾಡಿಕೊಂಡಳು ತಾಯಿ.

ತಾಯಿ ತಂದೆಗಳ ದೃಷ್ಟಿಯಲ್ಲಿ ಒಂದು ಬಗೆಯಾಗಿ ತೋರಿದ ಗೌರಿ ತನ್ನೊಳಗೆ ಬೇರೆಯೇ ಆಗಿದ್ದಳು....ಮತ್ತೆ ಮತ್ತೆ ಮನೆಯವರು ಮದುವೆಯ ಸುದ್ದಿ ಹೇಳುವಾಗ, ಅದನ್ನು ಕುರಿತು ಬಲವಂತ ಮಾಡುವಾಗ ಗೌರಿ ಅರಿತಳು—ಒಂದಲ್ಲ ಒಂದು ದಿನ ತನ್ನ ಮದುವೆ ಆಗಿಯೇಬಿಡುವುದೆಂದು........ ಈಗ ತಾನು ಮಾಡಬೇಕೇನು? ಶಿವನೇ ತನ್ನ ಗಂಡ ಎಂದು ನಿರ್ಧರಿಸಿ ಆತನ ಸಲುವಾಗಿ ಸಮಗ್ರ ಜೀವನವನ್ನೆ ಮನಃಪೂರ್ವಕ ಧಾರೆಯೆರೆದ ತಾನು ಈ ಮರ್ತ್ಯದ ಮಾನವನೊಬ್ಬನಿಂದ ತಾಳಿ ಕಟ್ಟಿಸಿಕೊಂಡು ವ್ಯಭಿಚಾರಿಣಿಯಾಗುವುದೆ?....ಮನೆಯಲ್ಲೆ ಉಳಿದರೆ ಹಾಗೆ ಮಾಡದೆ ಬಗೆಯಿಲ್ಲ......... ಅಹೋರಾತ್ರಿಗಳೂ ಗೌರಿ ಇದನ್ನೆ ಕುರಿತು ಯೋಚಿಸಿದಳು. ಏನು ಮಾಡುವುದು?....ಶಿವನನ್ನೇ ಕುರಿತು ತಪಸ್ಸು ಮಾಡುವುದು; ಸರಿ, ಅದೇ ಸರಿಯಾದ ಮಾರ್ಗ. ತಾನು ಒಲಿದು ಪತಿಯೆಂದು ನಂಬಿದ ಆ ಪರಶಿವನೇ, ಆ ಪ್ರಾಣ ಪತಿಯೇ ತನ್ನನ್ನು ಕಾದು ಮೇಲೆತ್ತಿಕೊಳ್ಳಲಿ. ಈ ವಸ್ತು ಬೇಕೆಂದರೆ ಎತ್ತಿಕೊಳ್ಳುತ್ತಾನೆ. ಒಲ್ಲೆ ಎಂದರೆ ತನ್ನ ತವರುಮಣ್ಣಿಗೇ ಮತ್ತೆ ಮರಳುತ್ತದೆ........ಗೌರಿಯ ಚಿತ್ತ ದೃಢವಾಯಿತು. ಇನ್ನು ಸಂದೇಹವಿಲ್ಲ, ಅಳುಕಿಲ್ಲ........

ಸತ್ತುಹುಟ್ಟೊ ಗಂಡನ್ನ ಒಲ್ಲೆನೆಂದಳು ಗೌರಿ
ಮನೆಬಿಟ್ಟು ತಪಕೆ ಹೊರಟಾಳು

ಒಂದು ದಿನ, ಇನ್ನೂ ಬೆಳಕು ಹರಿಯಲು ಒಂದು ಯಾಮವಿರುವಾಗ, ಆ ಶೀತಲ ಪ್ರಾತಃಪೂರ್ವದಲ್ಲಿ, ಗೌರಿ ತಂದೆತಾಯಿಯರನ್ನು ಬಿಟ್ಟು

ಮಮತೆಯ ಮನೆಯನ್ನು ತೊರೆದು ಯಾರಿಗೂ ತಿಳಿಯದಂತೆ ಹೊರಡಲನು ವಾದಳು :

ಮಿತ್ರೆ ಗೌರಮ್ಮ ಹೊಸ್ತಿಲಿಗ್ಹೋಗಾಗ
ಹೊಸ್ತಿಲ ಗೊಲ್ಲ ತಡೆದನು

ಮನೆಯ ಹೊಸತಿಲಿನಲ್ಲಿ ಬಾಗಿಲು ಕಾಯುವ ಗೊಲ್ಲನೊಬ್ಬ ನಿಂತಿದ್ದಾನೆ. ಎಲ್ಲರ ಕಣ್ಣನ್ನೂ ತಪ್ಪಿಸಿಕೊಂಡು ಬಂದವಳು ಈತನ ಕಣ್ಣನ್ನು ಮರೆಸುವು ದಾಗಲಿಲ್ಲ. ಸಂಗಡಲೇ ಆಟವಾಡಿ ರಮಿಸಿದವ. ಒಡತಿಯಾಗಿದ್ದರೂ ಗೆಳತಿಯಂತೆ ಭಾವಿಸಿ ತನ್ನೊಡನೆ ಆಡಿ ಕಾಡಿ ಪೀಡಿಸಿದ ಜೀವ. ತಾನು ಮನೆಬಿಟ್ಟು ಹೊರಡುವಾಗ ಕೊಟ್ಟಕೊನೆಯ ಮಮತೆಯ ಆತಂಕವಾಗಿ ಎದುರು ಅಡ್ಡ ನಿಂತಿದ್ದಾನೆ. ಮನೆಬಿಟ್ಟು ಎಲ್ಲಿ ಹೊರಟೆ ಗೌರಿ–ಎಂದು ಕೇಳುತ್ತಿದ್ದಾನೆ. ಬೇಡ ತಾಯಿ–ಎಂದು ತುಂಬಿದ ಕಣ್ಣುಗಳಿಂದ ಬೇಡು ತ್ತಿದ್ದಾನೆ. ಈ ಮಮತೆಯ ಸಣ್ಣ ತಂತುವನ್ನು ಹರಿದು ಓಡುವುದೊಂದು ದೊಡ್ಡದಲ್ಲ. ಆದರೆ....ಎಲ್ಲಿಯಾದರೂ ಈಗಲೇ ಈತ ತಂದೆತಾಯಿಗಳಿಗೆ ತಿಳಿಸಿಬಿಟ್ಟರೆ?—ವಿಪರೀತವಾದೀತು. ಅಲ್ಲದೆ, ತನ್ನ ಆತ್ಮೀಯ ಗೆಳೆಯ. ತನ್ನ ಒಳಿತೊಂದನ್ನೆ ಸದಾಕಾಲವೂ ಬಯಸುವ ಸಂಗಡಿಗ. ಆತನೆದುರು ಹೇಗೆ ಕಠಿನಳಾಗುವುದು?....ಆರ್ದ್ರ ದೃಷ್ಟಿಯಿಂದ ಗೌರಿ ತನ್ನ ಒಡನಾಡಿ ಯಲ್ಲಿ ಬೇಡಿಕೊಳ್ಳುತ್ತಾಳೆ:

ಹೊಸ್ತಿಲ ಗೊಲ್ಲ ನನ್ನ ತಡೆಯಲುಬೇಡ
ಶಿನಗೇ ಗತಿಯೆಂದು ನಡೆದಳು

'ತಡೆಯಬೇಡ' ಎಂದು ಹೇಳುವಾಗಲೇ ಕಣ್ಣಿನಿಂದ ನೀರು ಚಿಮ್ಮುತ್ತದೆ. ಧ್ವನಿ ಕಂಪಿಸುತ್ತದೆ. ಬಿಗಿದುಬಂದ ಸೆರೆಯಿಂದ ಪಿಸುಮಾತಿನಲ್ಲಿ ಸೆರಗು ಚೆಲ್ಲಿ ಬೇಡುವ ಈ ಬಾಲೆಯ ಮಾತನ್ನು ಆತ ಹೇಗೆ ತಿರಸ್ಕರಿಸಿಯಾನು? ಆತನ ಅಸಹಾಯಕ ದೈನ್ಯದೃಷ್ಟಿಯನ್ನು, ಬಗೆಯಿಲ್ಲದೆ, ಬಹುಕಷ್ಟದಿಂದ ತಪ್ಪಿಸಿಕೊಂಡು ಆಕೆ ಮುಂದೆ ನಡೆಯುತ್ತಾಳೆ. ಈತ ಬಾಗಿಲಿಗೊರಗಿ ಕತ್ತಲಲ್ಲಿ ಮರೆಯಾಗುತ್ತ ನಡೆದ ಆಕೆಯನ್ನು ತುಂಬಿ ಮಂಜಾದ ಕಣ್ಣು ಗಳಿಂದ ನೋಡುತ್ತ, 'ಈ ಚೆಲುವೆಯನ್ನು ಎಲ್ಲಿಯಾದರೂ ಕಾಪಾಡು ಶಿವ' ಎಂದು ಮೊರೆಯಿಡುತ್ತ ನಿಲ್ಲುತ್ತಾನೆ....

ಗೌರಿ ಮನೆಯ ತೋಟವನ್ನು ದಾಟುತ್ತಿದ್ದಾಳೆ.

ಅಜ್ಜ ಅಜ್ಜಿ ಮರ ರುದ್ರ ಹಲಸಿನ ಮರ
ಕಜ್ಜುರ ಕಾವು ಗಜಸಿಂಬೆ
ಕಜ್ಜುರ ಕಾವು ಗಜಸಿಂಬೆ ಮರನಡಿಗೆ
ಒಬ್ಬಳೆ ಸಿರಿಗೌರಿ ನಡೆದಳು

ಹೂವು ಹಣ್ಣುಗಳ ಗಿಡಮರಗಳೆಡೆ ನುಸುಳಿ ಹೋಗುವ ಕಾಲುದಾರಿಯಲ್ಲಿ, ಮುಂಜಾವಿಗೆ ಮುಂಚಿನ ತಿಳಿಗಾಳಿ ಹೂವರಳಿಸಿ ಹೂವುದುರಿಸುತ್ತಿರಲು, ಕೆಳಗೆ ದಟ್ಟಗತ್ತಲೆಯಮೇಲೆ ಮಾಸಲು ಬಿಳುಪಾಡುತ್ತಿರಲು, ಗೌರಿ ನಡೆದಳು....ಮನೆಯೊಂದೇ ಬಂಧನ ಎಂದು ತಿಳಿದಿದ್ದಳು ಗೌರಿ. ಈಗ, ಈ ತೋಟವೂ ಒಂದು ಬಂಧನವೇ. ಎಂದಿನಿಂದ ತನ್ನ ಸಂಗಾತಿಗಳಿವು. ಒಂದೊಂದು ಮರವೂ ಗಿಡವೂ ಬಳ್ಳಿಯೂ ಆಕೆಗೆ ಮಧುರವಾದ ಹಸಿರು ನೆನಪಿನ ಚಿತ್ರಪರಂಪರೆಗಳನ್ನೆ ಬಿಂಬಿಸುತ್ತದೆ. ಒಂದೊಂದೂ ಹೂವುದುರಿಸಿ ನಿಡುಸುಯ್ದು ಹೋಗಬೇಡ ಎಂದು ಮೊರೆಯಿಡುತ್ತದೆ. ಒಳಗಿನಿಂದುಕ್ಕುವ ಕರುಣೆ ಕಲ್ಲಾದ ಚಿತ್ತದ ಎದುರು ನಿಲ್ಲಲಾರದೆ ಕಂಬನಿಯಾಗಿ ಸುರಿದು ಹೋಯಿತು. ಎಲ್ಲ ಬಂಧನಗಳಿಂದಲೂ ಮುಕ್ತಳಾಗಿ ಗೌರಿ ನಡೆದಳು. ಗೌರಿ ನಡೆದೇಬಿಟ್ಟಳು........

–ಇಲ್ಲಿ? ಮನೆಯಲ್ಲಿ?....ಗೌರಿ ಇಲ್ಲದ ಮನೆ ಮನೆಯಲ್ಲ. ಎಲ್ಲೆಲ್ಲೂ ರಣರಣಗುಡುತ್ತಿದೆ; ಭಣಭಣವೆನ್ನುತ್ತಿದೆ. ಆಕೆ ಒಬ್ಬಳಿದ್ದಾಗ ಮನೆಯನ್ನೆಲ್ಲ ತುಂಬಿಕೊಂಡ ಗೆಲುವಾಗಿದ್ದಳು, ಚೆಲುವಾಗಿದ್ದಳು. ಆಕೆಯ ಮಾತು ನಗೆ ಘಲಿರುಘಲಿರೆನ್ನುವ ಪೈಜಣದಸದ್ದು ಯಾವುದೂ ಇಲ್ಲ ಈಗ. ತಂದೆತಾಯಿಯರಿಗೆ ಮನೆಯಲ್ಲಿನ ಈ ಶ್ಮಶಾನಶಾಂತಿ ಅಸಹ್ಯವಾಗುತ್ತದೆ. ತಾಯಿಯಂತೂ ತನ್ನ ಕರುಳುಬಳ್ಳಿಯನ್ನುಳಿದು ಸೊರಗಿ ಹೋಗುತ್ತಾ....ಳೆ ಮೋಹಕ್ಕೆ ಬಣ್ಣಕೊಟ್ಟು ವಿರಹಕ್ಕೆ ಉರಿತಾಕಿಸಿ ಸಂಜೆ ಕಾಲಿಡುತ್ತದೆ.... ಎಂತಹ ಉರಿ! ಮನೆಯಲ್ಲಿ ನಿಲ್ಲುವುದು ಅಸಾಧ್ಯವಾಗಿ, ಮನೆಯ ಎದುರಿನ ತೋಟದತ್ತ ನಡೆಯುತ್ತಾಳೆ ತಾಯಿ, ಅಲ್ಲಿನ ಮಕ್ಕಳನ್ನು–ಹೂಗಿಡಗಳನ್ನು–ನೋಡಿಯಾದರೂ ತುಸು ಶಾಂತಿ ಪಡೆಯಲೆಂದು. ತೋಟದಲ್ಲಿ ನೋಡಿದರೆ ಎಲ್ಲೆಲ್ಲೂ ಹೂ ಚಿಗಿತು ನಿಂತ ಗಿಡಮರಗಳು. ಮಗಳ ನೆನಪು ಮರುಕೊಳಿ

ಸುತ್ತದೆ. ಆಕೆಯಿದ್ದಿದ್ದರೆ ಹೂವನ್ನೆಲ್ಲ ಆಯ್ದು ಶಿವನಿಗರ್ಪಿಸುತ್ತಿದ್ದಳು. ತುಂಬುತುರುಬಿನಲ್ಲಿ ಮುಡಿದು ಅತ್ತಿಂದಿತ್ತ ಗೆಲುವಾಗಿ ನಡೆದಾಡುತ್ತಿದ್ದಳು ....ಈಗ ಅವಳೆಲ್ಲಿ? ಎಲ್ಲಿಯೋ! ...ಯಾವ ಮುಳ್ಳುಪೊದೆಯ ಅಡಿಯಲ್ಲಿ ಯೋ!....ದಿನದಿನವೂ ಬೆಳಕು ಹರಿಯುವ ಹೊತ್ತಿಗೆ ಆಕೆ ಎದ್ದುಬಂದು ಈ ಗಿಡಗಳನ್ನೆಲ್ಲ ಮೆಯ್‌ದಡವಿ ಮಾತನಾಡಿಸಿ ಹೋಗುತ್ತಿದ್ದಳು....ತನ್ನ ಸಂಗಾತಿ ಇಲ್ಲವೆಂದು ಸ್ವಲ್ಪವೂ ಮರುಕವಿಲ್ಲ ಈ ಮಲ್ಲಿಗೆಗೆ. ನಿಶ್ಚಿಂತೆಯಿಂದ, ಎಂದಿನಂತೆ ಮೆಯ್‌ತುಂಬ ಹೂಬಿಟ್ಟು ನಿಂತಿದೆ....ಒಮ್ಮೆ ನೋಡಿದರೆ, ತನ್ನ ಮಗಳೇ ಹೂಮುಡಿದು ಎದುರುನಿಂತಂತೆ ತೋರುತ್ತದೆ....ತಾಯಿ ಎದೆಕರಗುವ ದನಿಯಲ್ಲಿ ಹೇಳುತ್ತಾಳೆ :

ಹೊಸ್ತಿಲಾಗಿರುವ ಪುಟ್ಟ ಮಲ್ಲಿಗ್ಹೂವೆ
ನೀವರಳಿ ಬಾಯ ಬಿಡದಿರಿ
ನೀವರಳಿ ಬಾಯ ಬಿಡದಿರಿ ನಮ್ಮನೆಯ
ಹೂ ಕೊಯ್ಯೊ ಹುಡುಗಿ ಒಳಗಿಲ್ಲ

ತಾಯಿ ಅದನ್ನೆ ನೋಡುತ್ತ ನಿಲ್ಲಲಾಗದೆ ಮುಖ ತಿರುಗಿಸುತ್ತಾಳೆ....ಅಲ್ಲಿ ಮತ್ತೆ, ದೃಷ್ಟಿಯನ್ನು ತಿವಿಯುತ್ತ ನಿಂತಿರುವ ಹೂಬಿಟ್ಟ ಜಾಜಿ. 'ಅಯ್ಯೋ' ಎಂದು ಪರಿತಪಿಸಿ ಯಾತನೆಗೊಂಡು ನಿಟ್ಟುಸಿರುಬಿಟ್ಟು, ಅತಿದೈನ್ಯವಾಗಿ ಯಾಚಿಸಿಕೊಳ್ಳುತ್ತಾಳೆ :

ಅಂಗಳದಾಗಿರುವ ಪುಟ್ಟ ಜಾಜಿ ಹೂವೆ
ನೀವರಳಿ ಬಾಯ ಬಿಡದಿರಿ
ನೀವರಳಿ ಬಾಯ ಬಿಡದಿರಿ ನಮ್ಮನೆಯ
ಹೂ ಕೊಯ್ಯೊ ಹುಡುಗಿ ಒಳಗಿಲ್ಲ
ಹೂ ಕೊಯ್ಯೊ ಹುಡುಗಿ ಒಳಗಿಲ್ಲ ಹೊರಗಿಲ್ಲ
ನೀವರಳಿ ಬಾಯ ಬಿಡದಿರಿ

....ಇಲ್ಲಿ, ಮಗಳಿಗಾಗಿ ಹಂಬಲಿಸುತ್ತ ಸಂತತವಾದ ಅಶ್ರುತಪಸ್ಸಿನಲ್ಲಿ ಎದೆಕರಗುವಂತೆ ನರಳುತ್ತಿರುವ ತಾಯಿ ; ಅಲ್ಲಿ, ಅಘೋರಾಟವಿಯ ರಾಕ್ಷಸ ವೃಕ್ಷಗಳ ನಡುವೆ ಪತಿಗಾಗಿ ಹಂಬಲಿಸುತ್ತ ಅಗ್ನಿತಪಸ್ಸಿನಲ್ಲಿ ಶಿವನನ್ನೆ ಮೊರೆಯಿಡುತ್ತ ಕುಳಿತಿರುವ ಮಗಳು.

ಹದಿನಾರು ವರುಷಾನ ಹಾಲುಂಡು ಕಲ್ಲಿನಮೇಲೆ
ಹದಿನಾರು ಸೂಜಿ ಮೊನೆಯೂರಿ

ಆಕೆ ತಪಸ್ಸು ನಡೆಸಿದ್ದಾಳೆ....ಈ ಹದಿನಾರರ ಹರೆಯದ ಕುಸುಮಕೋಮಲೆ ಕಲ್ಲುಹಾಸಿನ ಸೂಜಿ ಮೊನೆಯ ಮೇಲೆ ನಿರಂತರವಾಗಿ ಮೊರೆಯಿಡುತ್ತ ಕುಳಿತುಬಿಟ್ಟಿದ್ದಾಳೆ....ದಿನ ಕಳೆದವು, ಮಾಸಗಳು ಉರುಳಿದವು; ವರ್ಷ ಬಂದು ವರ್ಷ ಹೋಯಿತು. ಕಾಲ ಉರುಳಿ ಉರುಳಿ ನಡೆದಿತು. ಎಲೆ ಉದುರಿ ಎಲೆ ಚಿಗುರಿದವು....ದಿನ ಕಳೆದುದನ್ನು ಎಣಿಸಲಿಲ್ಲ ಗೌರಿ; ಎಲೆ ಕಳಚಿ ಎಲೆ ತೊಡುವ ಮರಗಳ ಆಟ ಗಣಿಸಲಿಲ್ಲ ಗೌರಿ; ಹೂವಿನಂತಹ ದೇಹವನ್ನು ಒಮ್ಮೆ ಕಣ್‌ಬಿಟ್ಟು ನೋಡಲಿಲ್ಲ....ಮೇಲೆ, ಬೆಳ್ಳಿಯ ಬೆಟ್ಟದ ಮುಡಿಯಲ್ಲಿ ಕುಳಿತ ಶಿವ ದಿನಗಳನ್ನು ಎಣಿಸುತ್ತಿದ್ದ. ಪರಮ ವೈರಾಗ್ಯದ ಆ ಪಾಷಾಣಮೂರ್ತಿ, ಈ ಕೋಮಲೆಯ ತಪಸ್ಸನ್ನು ಕಂಡು ವಿಸ್ಮಿತನಾದ, ಹರ್ಷಗೊಂಡ....ಕೊನೆಗೊಮ್ಮೆ, ಎಲೆಯುದುರಿ ಎಲೆ ಚಿಗುರಲು, ಎಲೆ ಚಿಗುರಿ ಹೂವು ತುಂಬಲು, ಹೂವು ಮಿಡಿಯಾಗಿ ಕಾಯಾಗಿ ಮತ್ತೆ ಹಣ್ಣಾಗಿ ಮಾಗಿ ನಿಂತ ಒಂದು ಸುಂದರ ದಿನದ ಪ್ರಾತರ್ಮುಹೂರ್ತದಲ್ಲಿ ಕೈಲಾಸದಿಂದ ಇಳಿದು ಇಲ್ಲಿ ಉದಯವಾದ; ಬಡಜೋಗಿಯ ವೇಷದಲ್ಲಿ ಗೌರಿಯೆದುರು ನಿಂತು, ಕಣ್ಣು ತೆರಸಿ ಕೇಳಿದ:

ಹತ್ತಾರು ವರುಷಾನ ಹಾಲುಂಡು ಕಲ್ಲಿನಮೇಲೆ
ಹತ್ತಾರರ ಸೂಜಿ ಮೊನೆಯೂರಿ
ಹತ್ತಾರರ ಸೂಜಿ ಮೊನೆಯೂರಿ ಕಲ್ಲಿನಮೇಲೆ
ನಾರಿ ನೀ ಕುಂತ ತಪವ್ಹೇಳೆ
ನಾರಿ ನೀ ಕುಂತ ತಪವ್ಹೇಳ್ಹೆಣ್ಣೆ ನಿನ್ನ
ಮೂರೆ ಮ್ಯಾಲುಂಟು ಉರಿಬೆಂಕಿ

—'ಹೆಣ್ಣೆ, ಚೆಲುವೆಯಾದ ಕೋಮಲೆಯಾದ ನೀನು ಇಂತಹ ಕಠಿನ ತಪಸ್ಸಿಗೆ ಕುಳಿತು ಕ್ರೂರ ಮುಖವನ್ನು ತಳೆದೆಯೇಕೆ? ಈ ಅಮಿತವಾದ ಸೌಂದರ್ಯವೂ ಸಾಲದೆ ಇನ್ನಾವುದರ ಬೇಡಿಕೆಗೆ ನಿನ್ನ ತಪಸ್ಸು?' ಎಂದು ಪ್ರಶ್ನಿಸಿದ; 'ನೀನು ತಪಸ್ಸು ಮಾಡುವುದಲ್ಲ, ನಿನಗಾಗಿ ಬೇರೆಯವರು ತಪಸ್ಸು ಮಾಡಬೇಕು' ಎಂದು ಹೇಳಿದ. ಮತ್ತೆ ಸ್ವಲ್ಪಹೊತ್ತು ನೀರವವಾಗಿ ಏನನ್ನೋ ಯೋಚಿಸುವಂತೆ ಆಕೆಯನ್ನೇ ನೋಡಿದ. ಅನಂತರ, ಗುಟ್ಟು ಅರಿತವನಂತೆ, ದೊಡ್ಡದಾಗಿ ಒಮ್ಮೆ ನಕ್ಕು, 'ಓಹೋ, ಯಾವಳೋ ಒಬ್ಬ

ಹುಚ್ಚು ಹುಡುಗಿನ ಚೆಲುವೆ ಶಿವನಿಗಾಗಿ ತಪಸ್ಸುಮಾಡುತ್ತಿರುವಳೆಂದು ಕೇಳಿದ್ದೆ. ನೀನೇ ಇರಬೇಕು. ಅಲ್ಲವೆ?' ಎಂದು ಮತ್ತೆ ನಗಲಾರಂಭಿಸಿದ. ಮೌನವಾಗಿ ಕುಳಿತಿದ್ದ ಆಕೆಗೆ ಬುದ್ಧಿ ಹೇಳಲು ತೊಡಗಿದ :

ಬೂದಿಬಡುಕನಂತೆ ಬಗಲ ಜೋಳಿಗೆಯಂತೆ
ತೊಡಿಗೆ ಹಾವಿನ ಹೊರೆಯಂತೆ
ಮುಸಣ ಮಲಗಲಿಕಂತೆ ತೊಗಲು ಹೊದೆಯುವುದಂತೆ
ಕೊರಳಾಗೆ ಘೋರ ವಿಷವಂತೆ

'ಶಿವಾ ಶಿವಾ' ಎಂದು ಕಿವಿಯೊತ್ತಿಕೊಂಡಳು ಗೌರಿ; 'ಶಿವ ಶಿವಾ' ಎನ್ನುತ್ತ ಕಣ್ಣುಮುಚ್ಚಿ ಧ್ಯಾನಮಗ್ನಳಾದಳು. ಮರೆವೇಷದ ಶಿವ ಸುಮ್ಮ ನಾಗಲಿಲ್ಲ.

ಕೊರಳಾಗೆ ಘೋರ ವಿಷವಂತೆ ಎಲೆ ಹುಡುಗಿ
ಬಡಜೋಗಿ ಶಿವನ ಹುಚ್ಯಾಕೆ

ಎಂದು, ಅವಳ ಚಿತ್ತವನ್ನು ತಿವಿದು ಹೇಳಿದ. ಗೌರಿ ಕಣ್ಣುಬಿಡಲಿಲ್ಲ; ನೀನು ಹೇಳಿದ ಮಾತು ನನಗಲ್ಲ, ಗಾಳಿಗೆ–ಎನ್ನುವಂತೆ ತನ್ನ ಶಿವಧ್ಯಾನದಲ್ಲಿ ಮುಳುಗಿ ಕುಳಿತುಬಿಟ್ಟಳು. ಶಿವ ಮುಂದುವರಿಸಿದ :

ಮುಳ್ಳು ಮುತ್ತುಗ ಮರಕೂ ಮಲ್ಲಿಗೆ ಬಳ್ಳಿಗೂ
ಯಾವೂರ ನಂಟ ಎಲೆ ಹುಡುಗಿ
ಯಾವೂರ ನಂಟ ಎಲೆ ಹುಡುಗಿ ನಿನಗೀಗ
ಬಡಜೋಗಿ ಶಿವನ ಮರುಳ್ಯಾಕೆ

ತನ್ನ ಉಪಮಾನಸಹಿತವಾದ ಉಪದೇಶ ಕೂಡ ಆಕೆಯ ಕಿವಿ ತಾಕಲಿಲ್ಲ. ಆಕೆಯ ದೃಢ ಕಂಡು ಹರ್ಷವಾಯಿತು ಶಿವನಿಗೆ; ತನ್ನ ಆಟವನ್ನು ನೆನೆದು ತನಗೇ ನಗುಬಂದಿತು. ಆಕೆಯ ಕಣ್ಣು ತೆರೆಸಲು ಒಂದೇ ಉಪಾಯವೆಂದು ಕೊನೆಯ ಅಸ್ತ್ರವನ್ನು ಪ್ರಯೋಗಿಸಿದ ಶಿವ :

ಗಂಡ ಶಿವನಂಥವ ನಿನಗೆ ಬೇಕಾದರೆ
ನೀ ಬಾರೆ ಹುಡುಗಿ ನಮಕೂಡ
ಶಿವನ ಒಲಿವುದೊಂದೆ ನಮ್ಮ ಒಲಿವುದೊಂದೆ
ನೀ ಬಾರೆ ಹುಡುಗಿ ನಮಕೂಡ

ಉಳಿದ ಮಾತು ಕೇಳದಂತೆ ಕಿವಿಮುಚ್ಚಿ ಶಿವಧ್ಯಾನ ಮಾಡುತ್ತಿದ್ದ ಗೌರಿಗೆ ಈ ಮಾತು ಝೇಂಕರಿಸಿದಂತಾಯಿತು. ತುಪ್ಪ ಸುರಿದ ಬೆಂಕಿಯ ನಾಲಗೆ

ಯಂತೆ ಜಗ್ಗನೆ ಮೇಲೆದ್ದು, ಕಣ್ಣು ತೆರೆದಳು. ತೆರೆದ ಕಣ್ಣಿಗೆ ಸುತ್ತಣ ಜಗತ್ತೆ ಉರಿದು ಹೋಗಬೇಕು. ಆದರೆ, ಅಷ್ಟರಲ್ಲಿ, —ಏನಾಶ್ಚರ್ಯ!— ಎದುರಿನಲ್ಲಿ ಪರಶಿವನ ಉಜ್ವಲ ವಜ್ರಮೂರ್ತಿ! ಅಷ್ಟುಮಾತ್ರ ನೋಡಿದಳು ಗೌರಿ; ಮರುಕ್ಷಣದಲ್ಲಿ ಮೆಯ್‌ಮರೆತಿದ್ದಳು. ಹಾಲುಕೊಂಡ ಸಕ್ಕರೆಯಂತೆ ಶಿವನ ಅಪ್ಪುಗೆಯಲ್ಲಿ ಕರಗಿಹೋಗಿದ್ದಳು.

ತಾಸು ಕಳೆದಮೇಲೆ ಸುಖಮೂರ್ಛೆ ಸಂದಮೇಲೆ ಶಿವನ ಪಾದಕ್ಕೆರಗಿ, ಮತ್ತೆ ಮತ್ತೆ ಆ ವಜ್ರಪಾದಗಳನ್ನು ಕಣ್ಣಿಗೊತ್ತಿಕೊಳ್ಳುತ್ತ, ಆನಂದಾಶ್ರುಗಳಿಂದ ಕಾಲ್‌ದೊಳೆಯುತ್ತ ಹೇಳುತ್ತಿದ್ದಳು ಗೌರಿ :

ನೀವಾಗಿ ಕರೆದರೆ ನಾನಾಗಿ ಬಂದರೆ
ರಾಜ್ಯದ ಮ್ಯಾಲಿದೆ ನಡೆದಾವು
ನಾನಾಗಿ ಕರೆದರೆ ನೀವಾಗಿ ಬಂದರೆ
ಮರ್ತ್ಯದ ಮ್ಯಾಲಿದೆ ನಡೆದಾವು

ದಿಟ. ಜೀವ ಹಂಬಲಿಸಬೇಕು, ಕರೆಯಬೇಕು, ಮೊರೆಯಿಡಬೇಕು, ಉರಿಯ ದಾರಿಯಲ್ಲಿ ನಡೆದು ಆ ರಸರೂಪಿ ದೇವನನ್ನು ಕೂಡಬೇಕು. ಅದೇ ಮರ್ತ್ಯದ ಆದರ್ಶ, ಅದೇ ಸೃಷ್ಟಿಯ ಪರಮಧ್ಯೇಯ.

....ಹಾಗೆಂದು ನಂಬಿದ್ದಳು ಗೌರಿ. ಅವಳ ನಂಬುಗೆ ಸಫಲವಾಯಿತು. ಅವನು ಕರೆದು ತಾನು ಓಡಿದ್ದರೆ ಇಷ್ಟು ಸುಖ ಇರುತ್ತಿತ್ತೆಲ್ಲಿ? ಈಗ, ತಾನು ಕರೆದು ಅವನು ಓಡಿಬಂದು ನಿಂತಾಗ....—ಓಹ್, ಇದೆಂತಹ ಆನಂದಾನುಭೂತಿ!....

ಆಕೆಯ ದೃಢಚಿತ್ತವನ್ನು ಕಂಡ ಶಿವ ಸಂತೋಷಭರಿತನಾದನು. ತನ್ನನ್ನು ಮೆಚ್ಚಿ, ಮರ್ತ್ಯವನ್ನು ಒಲ್ಲೆನೆಂದು ಕಡೆಗಣಿಸಿ, ತನಗಾಗಿ ಹಂಬಲಿಸಿ ತಾನು ಕೈಹಿಡಿಯಲೆಂದು ಘೋರ ತಪಸ್ಸು ನಡೆಯಿಸಿ ಸಾರ್ಥಶ್ರಮಳಾದ ಈ ಚೆಲುವೆಯನ್ನು, ಈ ಅಮೋಘಸ್ಥೈರ್ಯದ ಎಳೆಯ ಆತ್ಮಪಂಡಿತೆಯನ್ನು ವರಿಸುವುದಕ್ಕೆ ಆತನಿಗೆ ಎಷ್ಟು ಹೆಮ್ಮೆಯೆನಿಸಬೇಡ?

ಚಪ್ಪರ ಹಾಕಲಿ ನನೆಕಟ್ಟ ಕಟ್ಟಲಿ
ಉತ್ತಮರಲ್ಲಿ ನೆರೆಯಲಿ
ಹಂದರನ ಹಾಕಲಿ ರಂಗೋಲಿ ಹೊಯ್ಯಲಿ
ನಾರಾಯರಲ್ಲಿ ನೆರೆಯಲಿ

ನನೆಕಟ್ಟು ತೂಗಿದ ಚಪ್ಪರ, ರಂಗೋಲೆಯಿಕ್ಕಿದ ಹಂದರ ಸಿದ್ಧವಾಯಿತು. ಹೂಗೊಂಚಲಿನ ಹಸಿರು ಹಂದರದ ಸಿರಿಯಡಿಯಲ್ಲಿ ಉತ್ತಮರೂ ಮಾರಾಯರೂ ನೆರೆದರು. ನೆರೆದೆಲ್ಲರ ಎದುರಿನಲ್ಲಿ ಧಾರೆ ನಡೆದು ಶಿವ ಗೌರಿಯ ಕೈ ಹಿಡಿಯುತ್ತಾನೆ.

ಧಾರೆಯನೆರೆವಾಗ ಮೂಗುತಿ ಬಿದ್ದವು

ಕೆಳಗೆ ಬಿದ್ದ ಮೂಗುತಿಯನ್ನು ಕಂಡು ಶಿವ ಹೇಳಿದ :

ನಿನಗಲ್ಲೆ ಗೌರಿ ಮರುತ್ಯಾಕೆ

ನಿಜ. ಮರ್ತ್ಯದ ಒಡವೆ ಅದು. ಬಾನಿನ ಒಡವೆ ಬಾನನೇರುವಾಗ ನೆಲದ ಒಡವೆ ಕೆಳಗುದುರುತ್ತದೆ. ಮತ್ತೆ,

ಧಾರೆಯನೆರೆವಾಗ ಮುತ್ತಿನೋಲೆ ಬಿದ್ದವು

ಮತ್ತೆ ಶಿವ ಹೇಳಿದ :

ನಿನಗಲ್ಲೆ ಗೌರಿ ಮರುತ್ಯಾಕೆ

....ಮರ್ತ್ಯ ಅಮರ್ತ್ಯಗಳ ಶಿವಸಮ್ಮೇಲನವಾಯಿತು. ಯಾವುದು ಮಣ್ಣೋ ಯಾವುದು ಮುಪ್ಪಿಗೆ ತೆರಳುವುದೋ ಯಾವುದು ಮೃತ್ಯುವಿನ ಪಂಜರದಡಿಯಲ್ಲಿ ಹೊರಳುವುದೋ ಆ ಜೀವ, ಈ ವಿವಾಹೋತ್ಸವದಲ್ಲಿ, ಯಾವುದು ಬೆಳಕೋ ಯಾವುದು ಜರಾರಹಿತವೋ ಯಾವುದು ಅಮರವೋ ಆ ದೇವನೊಂದಿಗೆ ಸಮಾಗಮಹೊಂದಿತು. ಬಹು ಹಿಂದಿನಿಂದ ಹಿಡಿದು ಇಂದಿನವರೆಗೂ ಯಾವುದು ಮಾನವನ ಮಹಾಭಿಲಾಷೆಯಾಗಿದ್ದಿತೋ ಆ ಬಯಕೆಗೆ ಆದರ್ಶವಾಗಿ, ಪ್ರಾತಿನಿಧ್ಯವಾಗಿ ಈ ಮಂಗಲೋತ್ಸವ ನೆರೆವೇರಿತು.

ಇಂದೀಗ್ಹರಹರ ಇಂದೀಗೆ ಶಿವ ಶಿವ

ಇಂದೀಗೀಶಂದೆ ಪದ ಮುಂದೆ

—ಇಂದಿಗೇನು ಎಂದೆಂದಿಗೂ!

---

# ೩. ಮಗನ ಕೊಟ್ಟರಿ ಶಿವನೆ ಶರಣೆಂಬೆ

ಗಣೇಶ ನಮ್ಮ ಜನರಿಗೆ ಅತ್ಯಂತ ಪ್ರಿಯನಾದ ದೇವರು. ಆಬಾಲ ವೃದ್ಧರಿಗೂ ಆತನಲ್ಲಿ—ಒಬ್ಬೊಬ್ಬರಿಗೆ ಒಂದೊಂದು ಬಗೆಯಾದ—ಆಸಕ್ತಿ. ನಮ್ಮ ಉಳಿದೆಲ್ಲ ದೇವರುಗಳಿಂದಲೂ ವಿಭಿನ್ನವಾದ ಒಂದು ವೈಶಿಷ್ಟ್ಯ ಆತನಿಗಿದೆ. ಜನರಿಗೆ ಆತನನ್ನು ಕುರಿತು ಪ್ರೀತಿಮಾತ್ರವಲ್ಲ, ಅವನನ್ನು ಕಂಡರೆ ತುಂಬ ಭಯ ಕೂಡ; ಅವನ ಕೃಪೆಯಿದ್ದರೆ ಮಾತ್ರವೇ ಕೈಗೊಂಡ ಕಾರ್ಯ ಸಾಂಗವಾಗುವುದೆಂಬ ನಂಬುಗೆ. ಆದ್ದರಿಂದ, ಪೂಜೆಗಳಲ್ಲೆಲ್ಲ ಅಗ್ರಪೂಜೆ ಆತನಿಗೆ ಮೀಸಲು; ದೇವತೆಗಳುಕೂಡ, ಪರಮೇಶ್ವರನ ಆ ಪ್ರೇಮದ ಪುತ್ರನನ್ನು, ವಿಘ್ನ ನಿವಾರಣಾರ್ಥವಾಗಿ ಪೂಜಿಸುವರಂತೆ.

ಆ ವಿಶಿಷ್ಟ ಮೂರ್ತಿಗೊಂದು ವಿಶಿಷ್ಟ ದೇಹ; ವಿಕೃತಿಯೇ ವೈಶಿಷ್ಟ್ಯ! ಒಡೆದು ಹಾವು ಸುತ್ತಿದ ಗುಡಾಣದಂತಹ ಹೊಟ್ಟೆ, ಆನೆಯಮುಖ! .... ಹೊಟ್ಟೆ ಒಮ್ಮೆ ಬೆಳೆದಿದ್ದೀತು, ಲೋಕದ ಮೊದಲ ಮೀಸಲುಗಾಣಿಕೆಗಳನ್ನು ವಿಶ್ವಾಸದಿಂದ ಸ್ವೀಕರಿಸಿ. ಆದರೆ ಆ ಆನೆಯಮುಖ ಎಲ್ಲಿಂದ ಬಂದಿತು ಈತನಿಗೆ? ....ಬಲ್ಲಿರೇನು?

ನಮ್ಮ ಜಾನಪದ ಕಥೆಗಾರರು ಹೇಳುತ್ತಾರೆ, ಕೇಳಿ:

ಬೆಳ್ಳಿಬೆಟ್ಟದ ಮ್ಯಾಲೆ ಬೆಳ್ಳಿ ಬೆಟ್ಟ ಬೆಳೆದು
ಮ್ಯಾಲೆ ಹೂಗೊಪ್ಪಲವೆ ನಲಿದಾವೊ

ಬೆಟ್ಟದಮೇಲೆ ಬೆಟ್ಟ ಹುಟ್ಟಿ ಬೆಳೆದ ಕೈಲಾಸಧಾರಿ ರಜತಪರ್ವತ ಮುಗಿಲನ್ನು ತೂರಿ ಮೇಲೆ ನಿಂತಿದೆ. ಆ ಬೆಳ್ಳಿಯ ಬೆಟ್ಟದ ಮೇಲು ಭಾಗ ದಲ್ಲಿ ಸಿಂಗಾರವಾಗಿ ಬೆಳೆಸಿದ ಹೂವಿನತೋಟ. ಅಲ್ಲಿನ ಬಣ್ಣ ಬಣ್ಣದ ಹೂವುಗಳ ಕಾಂತಿ ಬೆಟ್ಟದ ಹೊಳಪುಮೈಯ್ಯಲ್ಲಿ ಸದಾಕಾಲವೂ ಪ್ರತಿಬಿಂಬಿ ಸುತ್ತಿರಲು, ಇಂದ್ರಧನುಸ್ಸಿನ ಉಡುಗೆ ತೊಟ್ಟು ಮೆರೆಯುತ್ತಿದೆ ಆ ಪರ್ವತ.

ಮ್ಯಾಲೆ ಹೂಗೊಪ್ಪಲವೆ ನಲಿದಾವೊ ಆದರಾಗೆ
ಏಳುಪ್ಪರಿಗೆಯ ಮಠ ಕಟ್ಟಿ
ಏಳುಪ್ಪರಿಗೆಯ ಮಠ ಕಟ್ಟಿ ಶಿವರಾಯ

ನ್ಯಾಲುಪ್ಪರಿಗೇಲಿ ಗೌರಿಯು
ನ್ಯಾಲುಪ್ಪರಿಗೇಲಿ ಗೌರಿಯು ಜೊತೆಗೂಡಿ
ಚದುರಂಗವಾಡ್ಯಾನೊ ಶಿವರಾಯ

—ಶ್ಮಶಾನವೇ ನೆಲೆಯಾಗಿ, ಹುಲಿದೊವಲೇ ಉಡುಗೆಯಾಗಿ, ಹಾವುಗಳೇ ತೊಡವಾಗಿ, ಭಸ್ಮವೇ ಲೇಪನವಾಗಿ ಭಿಕಾರಿಯಂತೆ ತಿರುಗುವ ಶಿವ ಒಮ್ಮೊಮ್ಮೆ ರಸಿಕನೂ ಆಗಬಲ್ಲ. ಅವನ ವೈರಾಗ್ಯ ಎಷ್ಟು ಕಟುವೊ ಅಷ್ಟೇ ರಸಿಕತೆಯೂ ಬನಿ .......ಕಾಮನನ್ನು ಸುಟ್ಟು ಗೌರಿಯನ್ನು ಮದುವೆಯಾದ ಹೊಸತು. ಶಿವ ರಸಿಕನಾಗಿದ್ದಾನೆ. ಬೆಳ್ಳಿಯ ಬೆಟ್ಟದಮೇಲೆ ಹೂಗೊಪ್ಪಲು ಬೆಳಸಿ ಅಲ್ಲಿ ಏಳುಪ್ಪರಿಗೆಯ ಮಠ ಕಟ್ಟಿ, ಅದರ ಮೇಲುಪ್ಪರಿಗೆಯಲ್ಲಿ ಕುಳಿತು ಮುದ್ದು ಮಡದಿಯ ಕೂಡ ಚದುರಂಗದ ನೆವದಲ್ಲಿ ಸರಸವಾಡುತ್ತ ದಿನ ಕಳೆಯುತ್ತಿದ್ದಾನೆ........

ಹೀಗೆಯೇ ದಿನಗಳುರುಳುತ್ತಿರಲು ಒಂದು ದಿನ ಎಂದಿನಂತೆ ಸರಸವಾಡುತ್ತ ಕುಳಿತಿರುವಾಗ, ಯಾವುದೋ ಮಾತಿನ ಮಧ್ಯೆ ಶಿವ ಗೌರಿಯನ್ನು ಕೇಳುತ್ತಾನೆ:

ಗೋವೆ ಬಲ್ಯಾ ಗೌರಿ ಗುತ್ತಿ ಬಲ್ಯಾ ಗೌರಿ
ಮಲೆಸೀಮೆ ಬಲ್ಯಾ ಸಿರಿಗೌರಿ

ಆಕೆ ಪರ್ವತರಾಜನ ಹಿಮ ಸದನವನ್ನು ಬಲ್ಲಳು, ಅಘೋರ ತಪಸ್ಸಿಗೆ ಭೂಮಿಯಾದ ಘೋರ ಅರಣ್ಯವನ್ನು ಬಲ್ಲಳು, ಕೈಲಾಸಶಿಖರದ ಏಳುಪ್ಪರಿಗೆಯ ಮಠವನ್ನು ಬಲ್ಲಳು; ಇನ್ನಾವ ನಾಡು ನೋಡಿದ್ದಾಳೆ ಆ ಮುದ್ದು ಸಿಂಗಾರಿ?

ಗೋವೆನರಿಯೆ ಸ್ವಾಮಿ ಗುತ್ತಿನರಿಯೆ ಸ್ವಾಮಿ
ಮಲೆಸೀಮೆಯರಿಯೆ ಪರನಾಡ

ಕೇಳಿಯೂ ಅರಿಯದ ಯಾವುದೊ ಪರನಾಡು.

ಗೋವೆಯಾಚೆ ಗೌರಿ ಗುತ್ತಿ ದಾಟ ಗೌರಿ
ಮಲೆಸೀಮೆ ಅಲ್ಲಿ ಸಿರಿಗೌರಿ

ಗೋವೆಗುತ್ತಿಗಳಾಚೆ ಮಲೆಸೀಮೆಯಂತೆ. ಗೋವೆಗುತ್ತಿಗಳನ್ನು ಮೊದಲು ಬಲ್ಲವರಾರು?....ಒಲವಿನ ಹೊಸತನದಲ್ಲಿ ಜಗತ್ತನ್ನೆ ಮರೆತ ಆ ಮುಗ್ಧೆಗೆ ಗೋವೆಯೇಕೆ, ಗುತ್ತಿಯೇಕೆ, ಮಲಸೀಮೆಯ ಗೊಡವೆಯೇಕೆ?

ತನ್ನ ಚೇತನದ ಸಮಸ್ತ ಕಣಗಳ ಸರ್ವಕುತೂಹಲವೂ ಶಿವನ ದೇಹವನ್ನೆ ಮುತ್ತಿಕೊಂಡಿರುವಾಗ, ಯಾವ ನಾಡಿನ ಬಗೆಗೆ ಏನು ಯೋಚನೆ?— ಕಣ್ಣು ಕಣ್ಣುಗಳ ನಡುವೆ ಮಿಂಚು ಹೊಯ್ಯುತ್ತಿರಲು, ತುಟಿತುಟಿಗಳ ನಡುವೆ ಸಿಹಿ ತೂರಾಡುತ್ತಿರಲು, ತನ್ನ ಗಂಡ, ಯಾವುದೋ ಸೀಮೆಯ ಸುದ್ದಿ ಹೇಳಿ ಈ ಸುಖಕ್ಕೆ ಭಂಗತರುತ್ತಿದ್ದಾನೇಕೆ?....ಉದಾಸೀನಳಾಗಿಯೇ ಹೇಳುತ್ತಾಳೆ ಗೌರಿ :

ಎಲ್ಲಿ ಇದ್ದರೆ ಇರಲಿ ಹ್ಯಾಂಗೆ ಇದ್ದರೆ ಇರಲಿ
ಇಂದ್ಯಾಕೆ ಸುದ್ದಿ ಪರನಾಡ

—ಹ್ಞ, ಈಗ ಶಿವನಿಗೆ ಹೇಳಲು ಹದು ಸಿಕ್ಕಿತು :

ಗೋವೆಯಾಚೆ ಗ್ಯಾರಿ ಗುತ್ತಿ ದಾಟಿ ಗೌರಿ
ಮಲೆಸೀಮೆಗ್ಹೋಗಿ ಬರುತೇವೆ

ಇದೇನು? ಯಾವುದೋ ಮಾತಿನಲ್ಲಿ ಯಾವುದೋ ಹೇಳಿ ಈಗ ಮತ್ತೇನನ್ನೋ ಸೂಚಿಸುತ್ತಿದ್ದಾನೆ ತನ್ನ ಪತಿ. ಇಷ್ಟು ದಿನವು ತನ್ನ ಕಣ್ಣುಗಳ ಹಬ್ಬವಾಗಿ ರಂಜಿಸುತ್ತಿದ್ದ ಈ ಸವಿಗಾರ ಈಗ ತನ್ನನ್ನು ಬಿಟ್ಟು ಹೊರಡುವ ಸನ್ನಾಹಮಾಡುತ್ತಿದ್ದಾನೆ....ಇಷ್ಟು ದಿನಕ್ಕಾಗಲೇ ಒಲವು ಬೇಸರತಂದಿತೇನು? ಗಂಡಸರಿಗೆ ಪ್ರೇಮ ಬಲು ಬೇಗ ಹಳಸಿಹೋಗುತ್ತದೆಯಂತೆ....— ಛೆ, ಇದೇನು ಯೋಚಿಸುತ್ತಿರುವುದು? ತಾನು ಅರಿಯದುದೇ ಶಿವನ ಮನಸ್ಸು? ಆತನಿಗೆ ಬೇಸರವಾಗಿದ್ದರೆ, ಆತನ ಚಿತ್ತದೊಡನೆ ಒಂದಾಗಿ ಬೆಸೆದಿದ್ದ ತನ್ನ ಮನಸ್ಸು, ಅದನ್ನು ಅರಿತು ಕಂಪಿಸುತ್ತಿರಲಿಲ್ಲವೆ? ಅಲ್ಲದೆ, ಆ ಕಣ್ಣುಗಳನ್ನು ನೋಡಿದರೆ ತಿಳಿದೀತು, ಮಾತಿನ ನಡುಕವನ್ನು ನೋಡಿದರೆ ತಿಳಿದೀತು–ಯಾವುದೋ ಅನಿವಾರ್ಯವಾದ ಕಾರ್ಯವಿರಬೇಕು. ಹೆಣ್ಣಿನ ಹಾಗೆ ಗಂಡೂ ಸದಾ ಮನೆಯಲ್ಲೆ ಕುಳಿತರೆ ನಡೆದೀತೆ?........ಒಳ್ಳೆಯದು. ಕಾರ್ಯವಿದ್ದರೆ ಹೋಗಿಬರಲಿ. ತಾನು ನೊಂದುದನ್ನು ಆತನಿಗೆ ತೋರಿಸಿಕೊಂಡು ಆತನೂ ನೋಯುವಂತೆ ಮಾಡಬಾರದು. ತನ್ನ ನೋವು ನುಂಗಿ ಆತನ ಕಾರ್ಯವನ್ನು ಆಗುಗೊಳಿಸಬೇಕು. ಅದು ಮಡದಿಯಾದ ತನ್ನ ಕರ್ತವ್ಯ....ಹೇಗೂ ಬೇಗ ಬಂದಾನು........

ಸಂಜೆಗೆ ಬರುತಿರ ಸ್ವಾಮಿ ಮುಂಜಾನೆ ಬರುತೀರ
ನಾಳಿನಿರುಳಿಗೆ ಬರುತೀರೋ

ನಾಳಿನಿರುಳಿಗಿಂತ ಮುಂದೆ ಆಕೆಯ ಯೋಚನೆ ಹರಿಯಲಿಲ್ಲ. ತನ್ನ ಒಲವಿನ ಪತಿ ತನ್ನನ್ನು ಎಷ್ಟು ಹೊತ್ತು ಬಿಟ್ಟದ್ದಾನು? ತನ್ನಂತೆ, ಆತನೂ ಅಗಲಿಕೆಯನ್ನು ನೆನೆದೇ ನಡುಗುವುದಿಲ್ಲವೆ? ....–ನಕ್ಕು ಹೇಳಿದ ಶಿವ :

ಸಂಜೆಗೆ ಬರಲಾರೆ ಮುಂಜಾನೆ ಬರಲಾರೆ
ನಾಳಿನಿರುಳಿಗೂ ಬರಲಾರೆ
ನಾಳಿನಿರುಳಿಗೂ ಬರಲಾರೆ ನನ ಗೌರಿ
ಹತ್ತು ದಿನದಾಗೆ ಬರುತೇನೆ

ಹತ್ತು ದಿನ. ಒಂದಲ್ಲ ಎರಡಲ್ಲ, ಹತ್ತು ಹಗಲು ರಾತ್ರಿಗಳು. ಶಿವನ ಸುಂದರಮುಖ ಕಣ್ಣು ತುಂಬದ ಹತ್ತು ಹಗಲುಗಳು; ಆತನ ಬಿಗಿಯಪ್ಪುಗೆಯ ಬಿಸಿ ತಾಕದ ಹತ್ತು ರಾತ್ರಿಗಳು! ....ತಾನು ಹೀಗೆ ಮುಖ ಕಿರಿದು ಮಾಡಿ ಯೋಚಿಸುತ್ತಿರುವುದು ತಿಳಿದುಹೋಯಿತೇನೊ ಶಿವನಿಗೆ. ಅಷ್ಟರಿಂದಲೇ ಆತನ ಮುಖ ಮುದುಡಿಕೊಳ್ಳುತ್ತಿದೆ....ಛೆ, ತಾನು ಹಾಗೆ ಯೋಚಿಸಬಾರದು. ಒಳಿತೆಂದು ಆತನನ್ನು ನಗುನಗುತ್ತ ಕಳಿಸಿಕೊಡಬೇಕು.

....ಮರುದಿನ ಮುಂಜಾನೆ, ರಜತಾಚಲ ರಂಗು ರಂಗಿನ ಉತ್ತರೀಯದಿಂದ ಸಿಂಗಾರಗೊಳ್ಳುತ್ತಿರಲು, ಪಯಣಕ್ಕೆ ಅಣಿಯಾದ ಶಿವನನ್ನು ಬೀಳ್ಕೊಟ್ಟಳು ಗೌರಿ; ಮುದುಡಿದ ಬಗೆಯನ್ನು ಅರಳುನಗುವಿನಿಂದ ಸಾವರಿಸಿ ಬೀಳ್ಕೊಟ್ಟಳು. ಶಿವ ಮಲೆಸೀಮೆಯನ್ನು ಕುರಿತು ನಡೆದೇಬಿಟ್ಟನು.

....ಗೌರಿಯ ನೂತನ ದಾಂಪತ್ಯ ಜೀವನದಲ್ಲಿ ಮೊತ್ತಮೊದಲನೆಯ ಅಗಲಿಕೆ; ತಾರುಣ್ಯದ ಉತ್ಸಾಹದಲ್ಲಿ ಒಲವಿನ ಉತ್ಸವದಲ್ಲಿ ಮೊದಲನೆಯ ಕಾತರ........ತೆರವುಮಂಚದ ಮೊದಲ ಇರುಳು ಕಳೆದು ಬೆಳಕು ಹರಿಯಿತು........

ಎರಡು ಹೂವಿಟ್ಟಳು ಒಂದು ಹೂ ತೆಗೆದಳು

....ಸಲುಗೆ ಕಂಡು ಕಾಡಿಸುವ ತುಂಟ ಬಾಲಕನಂತೆ, ಒಂದೊಂದು ದಿನವೂ, ಗೌರಿಯ ಕೂಡ ಸ್ಪರ್ಧಿಸಿ ಇನ್ನಷ್ಟು ಮತ್ತಷ್ಟು ತೋಳು ಚಾಚಿ ಕ್ಷಣಕ್ಷಣವನ್ನೂ ಅಸಹ್ಯಗೊಳಿಸಿ ಕೊನೆಯಲ್ಲಿ ಆಕೆಯ ರೊಚ್ಚು ಕಂಡು ನಗುತ್ತ ಅಡಗುತ್ತಿತ್ತು; ಒಡೊಂದು ಇರುಳೂ, ಕಣ್ಣುಕಟ್ಟಿ ಉರಿಯಿಕ್ಕಿ ಆಕೆಯನ್ನು ಹೀರಿ ಹಿಂಡಿ, ಬೆಳಕಿಗೆಸೆಯುತ್ತಿತ್ತು....ದಿನ ದಿನವೂ ಬೆಳಗಿನಲ್ಲಿ, ಬಸವಳಿದ

ಗೌರಿ ಬಾಡಿದ ಹೂವುಗಳನ್ನೆತ್ತಿ ಹೊಸ ಹೂವುಗಳನ್ನಿಡುತ್ತ ದಿನಗಳನ್ನೆಣಿಸುತ್ತಿದ್ದಳು:

ಮೂರು ಹೂವಿಟ್ಟಳು ಎರಡು ಹೂ ತೆಗೆದಳು
ನಾಕು ಹೂವಿಟ್ಟಳು ಮೂರು ಹೂ ತೆಗೆದಳು
ಐದು ಹೂವಿಟ್ಟಳು ನಾಕು ಹೂ ತೆಗೆದಳು

ಒಂಬತ್ತು ಕಳೆದು ಹತ್ತನೆಯ ದಿನ:

ಹತ್ತು ಹೂವಿಟ್ಟಳು ಒಂಬತ್ತು ತೆಗೆದಳು

....ಅಂತೂ ಹತ್ತು ದಿನಗಳು ಕಳೆದವು....ತನ್ನ ಇನಿಯ ಇಂದು ಬರುವನೆಂದು ಸಂತಸಗೊಂಡಳು ಗೌರಿ. ಮೆಯ್ ಮನೆಗಳನ್ನು ಚೆಲುವಾಗಿ ಸಿಂಗರಿಸಿದಳು. ಹೂಮಾಲೆ ಕಟ್ಟಿ ಹೊಸಿಲಬಳಿ ಕಾಯುತ್ತ ನಿಂತಳು.... ಕ್ಷಣಕ್ಷಣ ಕಳೆದಂತೆ ಕಾತರ ಹೆಚ್ಚುತ್ತಿತ್ತು. ನೋಟ ಉದ್ದವಾಗುತ್ತಿತ್ತು....ಕಾತರ ಹೆಚ್ಚಿದಂತೆ, ನೋಟ ಉದ್ದವಾಗುತ್ತಿದ್ದಂತೆ ಹೊತ್ತು ಜಾರುತ್ತಿತ್ತು....ದಿನ ಏರಿ ಇಳಿಯತೊಡಗಿತ್ತು........ಕೊನೆಗೆ ಸಂಜೆಯೂ ಕಾಲಿಟ್ಟಿತು. ಗೌರಿಯ ಕಾತರ ಕಡಲ್ಪರಿಯಿತಲ್ಲದೆ ಶಿವನ ಬರವು ಕಾಣಲಿಲ್ಲ.

ದಿನ ಹತ್ತು ಕಳೆದವು ಶಿವರಾಯ ಬರಲಿಲ್ಲ

ಹತ್ತರ ಕೂಡ ಹನ್ನೊಂದು ಕಳೆದರೂ ಶಿವ ಬರಲಿಲ್ಲ.

ಒಬ್ಬಳೇ ಇರಲ್ಹ್ಯಾಂಗೆ ಬ್ಯಾಸರಾದವು ಸ್ವಾಮಿ

ಎಂದು ಗೊಣಗಿದಳು ಗೌರಿ.

ತಿಂಗಳು ಕಳೆದೀತು ಶಿವರಾಯ ಬರಲಿಲ್ಲ

ಹತ್ತು ದಿನದ ಅವಧಿ ಹೋಗಿ ಮೂವತ್ತು ದಿನಗಳಾದವು.

ಒಬ್ಬಳೇ ಇರಲಾರೆ ಮಳ್ಳಾದೆನು ಸ್ವಾಮಿ

ಎಂದು ಪರಿತಪಿಸಿದಳು ಗೌರಿ.

ಎರಡು ತಿಂಗಳು ಕಳೆದು ಶಿವರಾಯ ಬರಲಿಲ್ಲ

ಹತ್ತು ಅರುವತ್ತಕ್ಕೇರಿತು.

ಒಬ್ಬಳ ಇದ್ದರಿನ್ನು ಹರಣ ಹಾರ‍್ಯಾವು ಸ್ವಾಮಿ

ಎಂದು ಕನಲಿದಳು ಗೌರಿ.

....ತನ್ನಲ್ಲಿಯೇ ಗೊಣಗಿದಳು, ತನ್ನಲ್ಲಿಯೇ ಪರಿತಪಿಸಿದಳು, ತನ್ನಲ್ಲಿಯೇ ಕನಲಿದಳು....ಏನಾದರೇನು ? ಈಕೆಯ ಕೂಗು ಏಳುಪ್ಪರಿಗೆಯ ಮೇಲು

ಪ್ಪರಿಗೆಯಿಂದ ಹೂಗೊಪ್ಪಲನ್ನು ದಾಟಲೇ ಇಲ್ಲ....ತಿಂಗಳು ಹಬ್ಬವಿಲ್ಲದ ಎರಡು ಹುಣ್ಣಿಮೆ ಜಾರಿದರೂ ಶಿವರಾಯ ಬರಲಿಲ್ಲ.... –ತನ್ನ ಒಲವಿನರಾಯ ಹೀಗೇಕೆ ಮಾಡಿದ? ತನ್ನ ಮುದ್ದಿನ ಸವಿಗಾರ ಏಕೆ ಮೋಸಗೈದ? ....ತನ್ನ ಮೇಲೆ ಬೇಸರವೆ? ನಾಲ್ಕು ದಿನ ಹೊಸತರಲ್ಲಿ ಏನೋ ಆಗಿ ತೋರಿದ ಒಲವು ಐದನೆಯ ದಿನಕ್ಕೆ ಹಳಸಿತೆ? ....ಗಂಡಸರೆಲ್ಲರೂ ಹೀಗೆಯೇ ಇರಬೇಕು! ....ಅಚಿಂತ್ಯ ತಪಸ್ಸಿನ ಅಗ್ನಿದಿವ್ಯದಿಂದಲೂ ವಿಚಲಿತಳಾಗದೆ ವಿಶ್ವಾಸದ ಪರೀಕ್ಷೆಕೊಟ್ಟು ತಾನು ಆತನನ್ನು ಪಡೆದರೆ, ನಾಲ್ಕು ದಿನದಲ್ಲಿ ಆತನಿಂದಲೇ ವಂಚನೆಯ ಫಲವನ್ನು ಕೊಳ್ಳಬೇಕಾಯಿತೆ? ....ಆತನ ಸಾನ್ನಿಧ್ಯದ ಸಲುವಾಗಿ ತಾನು ಅನುಭವಿಸಿದ ಕಷ್ಟ ಎಂತಹದು! ಆ ಎಲ್ಲ ಕಷ್ಟಗಳನ್ನೂ ನೀವರಿಸಿ ಹಾಲುಗೊಳಿಸುವ ಸಂಜೀವಿನಿ ದೊರೆಯಿತೆಂದು ಹಿಗ್ಗಿ ಈತನ ಮಡಿಲಿಗೆ ಬಂದು ಬಿದ್ದರೆ, ಕ್ಷಣದಲ್ಲಿ ಮೋಸಮಾಡಿ ಓಡಿದನು....ಮಲೆಸೀಮೆ ಕೇವಲ ನೆವ. ಯಾವ ಮತ್ತೊಬ್ಬ ಹೊಸ ಚೆಲುವೆಯ ತುಟಿಯ ಸವಿಗಾಗಿ ಈ ನೆವವೋ! .... –ಮತ್ತೆ ಮತ್ತೆ ಅದನ್ನೆ ಚಿಂತಿಸಿ ಉದ್ವೇಗಗೊಂಡಳು, ಕನಲಿದಳು, ಅತ್ತಳು; ತನ್ನನ್ನೆ ನಿಂದಿಸಿಕೊಂಡಳು. ಅವಳ ಮೆಯ್ ಮರವಾಯಿತು, ಮನಸ್ಸು ಬೆಂಡಾಯಿತು. ಕಣ್ಣುಗಳು ಬತ್ತಿಹೋದವು....ತನ್ನ ತವರಿನ ನೆನಪಾಯಿತು ಗೌರಿಗೆ. ತಾಯಿಯನ್ನು ನೆನೆದಾಗ ಬತ್ತಿದ ಕಣ್ಣುಗಳಲ್ಲಿಯೂ ಒರತೆಯುಕ್ಕಿತು.....ತನ್ನ ಬಾಲ್ಯದ ದಿನಗಳೆಲ್ಲ ಕಣ್ಣುಮುಂದೆ ಸುಳಿದು ಓಡಿದವು....ಎಷ್ಟು ಚಂದವಾಗಿತ್ತು ಆ ಕಾಲ!....ತಿಳಿನೀರಿನ ಕೆರೆಯ ದಡದಲ್ಲಿ, ಕಣಿಗಲ ಮರನ ಅಡಿಯಲ್ಲಿ, ಹೂ ಬಿಟ್ಟ ಮಾವಿನ ತೋಪಿನಲ್ಲಿ........ಓಹ್, ಎಂತಹ ಉಜ್ವಲಸ್ಮರಣೆಗಳವು! ....ತಡೆಯಲಾರದೆ ಎದ್ದು ಓಡಿದಳು ಗೌರಿ........

> ಎದ್ದು ನಡೆದಳು ಗೌರಿ ಜಿಳಿಮಣ್ಣು ತಂದಳು
> ಮಣ್ಣು ತಂದಳು ಗೌರಿ ಗೊಂಬೆಯ ಮಾಡ್ಯಾಳು
> ಗೊಂಬೆಯ ಮಾಡ್ಯಾಳು ಆಳೆತ್ತರ ಗೊಂಬೆ
> ಆಳೆತ್ತರ ಗೊಂಬೆ ನೋಡ್ಯಾಳು ಕುಣಿದಳು

ಬಾಲ್ಯದ ದಿನಗಳಂತೆಯೇ ಕುಣಿದುಬಿಟ್ಟಳು ಗೌರಿ........ಎಷ್ಟು ಚೆನ್ನಾಗಿ ಮೂಡಿಬಿಟ್ಟಿದೆ ಈ ಬೊಂಬೆ, ಆಳೆತ್ತರವಾಗಿ! ....ಇಂತಹ ಒಬ್ಬ ಮಗನಿದ್ದರೆ

ಇಂತಹ ಒಂದು ಮಾಣಿಕ್ಯವಿದ್ದರೆ ತನಗೆಲ್ಲಿ ಬೇಸರವಾಗುತ್ತಿತ್ತು ?........ ಎರಡು ತಿಂಗಳಲ್ಲ, ಎರಡು ವರ್ಷ ಮನೆಬಿಟ್ಟುಹೋಗಲಿ ಶಿವ, ತನಗೆ ಚಿಂತೆಯಿರುತ್ತಿತ್ತೆ ?....ಏನು ಮಾಡುವುದು, ಆ ಭಾಗ್ಯ ಇನ್ನೆಷ್ಟು ದಿನಗಳಿಗೊ ! ....ರಾಯನ ಚಿತ್ತ....ಒಮ್ಮೆ....ಈ ಬಿಳಿಯ ಮಣ್ಣಿನ ತುಂಬುಬೊಂಬೆಗೆ ಜೀವ ಬಂದುಬಿಟ್ಟದ್ದರೆ ! ....ತನ್ನ ಕಲ್ಪನೆಯಿಂದ ಪುಲಕಗೊಂಡಳು ಗೌರಿ.... ನಿಜ, ಈ ಬೊಂಬೆಗೇ ಜೀವ ತುಂಬಿಸಬೇಕು.....ತನ್ನ ಪತಿ ದೇವದೇವನಲ್ಲವೆ? ಆತನ ಕೃಪೆಯೊದಗಿದರೆ ಈ ಬೊಂಬೆಗೆ ಜೀವ ಬರುವುದು ಎಷ್ಟರ ಮಾತು ?........

ಆಳೆತ್ತರ ಗೊಂಬೆ ಶಿವರಾಯನಿಚ್ಛಿಂದ
ಜೀವ ತಾಳಲಿ ನನ್ನ ಮಗನಂತ ಸಲಹೇನು
ಮಗನಂತ ಸಲಹೇನು ಬ್ಯಾಸರ ಕಳೆದೇನು

ಎಂದು ಹಂಬಲಿಟ್ಟಳು ಗೌರಿ. ಆಕೆಯ ಹಂಬಲ ಬಂಜೆಯಾಗಲಿಲ್ಲ. ಸಮಸ್ತಲೋಕಗಳಿಗೂ ಯಾವನು ಮೂಲಸ್ತಂಭದಂತಿರುವನೊ ಅಂತಹ ಮಹಾಮಹಿಮನಾದ ಶಿವನ ಕೃಪೆಗೆ ಇದು ಯಾವ ದೊಡ್ಡದು?

ಆಳೆತ್ತರ ಗೊಂಬೆ ಜೀವವ ತಾಳಿತು
ಜೀವ ತಾಳಿತು ಗೌರಿ ಮಗನಂತ ನೋಡ್ಯಾಳು
ಮಗನಂತ ನೋಡ್ಯಾಳು ಬೆನಕ ಹೆಸರಿಟ್ಟಳು
ಬೆನಕ ಹೆಸರಿಟ್ಟಳು ಬ್ಯಾಸರ ಕಳೆದಳು

....ದಿನಗಳ ಕೂಡ ದಿನಗಳು ಕಳೆದವು. ಎರಡು ತಿಂಗಳ ಕೂಡ ಮೂರನೆಯ ತಿಂಗಳೂ ಜಾರಿತು. ಶಿವ ಮರಳಲೇ ಇಲ್ಲ. ಈಗ ಮಾತ್ರ ಶಿವ ಬರಲಿಲ್ಲವೆಂದು ಗೌರಿ ಬೇಸರಿಸಲಿಲ್ಲ. ಬೆನಕ ಮೂಡಿದಂದಿನಿಂದ ಆಕೆಯ ಜೀವನ ಬದಲಾಗಿಹೋಗಿದೆ. ಆಕೆಯ ಸರ್ವಸ್ವವೂ ಹೊಸದಾಗಿ, ವಿಶ್ವವೇ ಅತಿ ನೂತನವೆಂಬಂತೆ ಭಾಸವಾಗುತ್ತಿದೆ....ಬೆನಕ ಮನೆತುಂಬ ಸುತ್ತುತ್ತಾನೆ. ಮುದ್ದು ಮುದ್ದಾಗಿ ಮಾತನಾಡಿ ಚಿತ್ತದ ಮೇಲೆ ಅಮೃತದ ಮಳೆಗರೆಯುತ್ತಾನೆ. ಬೆಳ್ಳಿಯ ಬೆಟ್ಟಕ್ಕೆ ಕೂಡ, ಈಗ ಹೊಸದಾಗಿ ಜೀವ ಬರುತ್ತಿರುವಂತೆ ತೋರುತ್ತದೆ; ಕೊಪ್ಪಲಿನ ಹೂಗಿಡಗಳು ತುಂಬ ವಾಚಾಳಿಗಳಾಗಿಬಿಟ್ಟವೆ. ಏಳುಪ್ಪರಿಗೆಯ ಮನೆ ತೆರಪಿಲ್ಲದೆ ನಗುತ್ತಿರುತ್ತದೆ....ಏನು ಚೆಂದ ಈ ಮುದ್ದು ಮಗುವಿನ ಲೀಲೆ ! ....ತನ್ನ ಒಲವಿನ

ಪತಿಯ ಅಗಲಿಕೆಯ ನೋವನ್ನು ಕೂಡ ಮರೆಸಿಬಿಟ್ಟಿದ್ದಾನೆ ಈ ಮುದ್ದು ಪೋರ!

ಹೀಗೆಯೇ, ನೆಲವೆಲ್ಲ ನಗುವಾಗಿ ಹೊತ್ತೆಲ್ಲ ಹಾಡಾಗಿ ಇರುತ್ತಿರಲು ಒಂದು ದಿನ,

ಏಳು ಕೊಪ್ಪರಿಗೇಲಿ ಮರಳ್ಯಾವು ತಿಳಿಸೀರು
ಜಳಕಾಕ್ಹೋಗತೇನೋ ಬೆನಮಯ್ಯ
ಜಳಕಾಕ್ಹೋಗತೇನೊ ಬೆನಮಯ್ಯ ಹೊಸಿಲಾಗೆ
ಕಾದಿರು ಬ್ಯಾಗ ಬರುತೇನೆ

ಎಂದು ಹೇಳಿ, ಬೆನಕನನ್ನು ಬಾಗಿಲಲ್ಲಿ ಕಾಯಕೂರಿಸಿ ಗೌರಿ ಜಳಕಕ್ಕೆ ನಡೆದಳು. ಬೆನಕ ಬಾಗಿಲಲ್ಲಿ ಕುಳಿತ-ಹೊಸ್ತಿಲ ಚಿತ್ತಾರದ ಗಿಣಿಗಳನ್ನು ಮಾತನಾಡಿಸುತ್ತ, ಸುತ್ತಣ ತೊಂಗಲು ಹೂಗಳನ್ನು ನಗಿಸುತ್ತ.

ಕಾದಿರು ಬ್ಯಾಗ ಬರುತೇನೆ ಎಂದ್ಹೇಳಿ
ಗೌರಿ ಜಳಕಕೆ ನಡೆದಾಗ
ಅತ್ತಿಂದಲೊಬ್ಬ ಜೋಗಿ ಜಂಗಮ ಬಂದ
ನಾಗಪಾತರೆಯ ನಡುಗಿಟ್ಟು

ಚಿತ್ತಾರದ ಗಿಣಿಯ ಕೂಡ ಬೆನಮ ಮಾತನಾಡುತ್ತ ಕುಳಿತಿರಲು ಅತ್ತ ಣಿಂದ ಒಮ್ಮೆಲೇ ಹಲವು ಪಾರಿವಾಳಗಳು ಎರಗಿ ಬಂದವು. ತಲೆಯೆತ್ತಿ ನೋಡಿದ ಬೆನಮ. ದೂರದಲ್ಲಿ ಯಾರೋ ಬರುತ್ತಿದ್ದರು....ಯಾವನೋ ಜಂಗಮ. ಕಾವಿಯುಟ್ಟು, ನಡುವಿಗೆ ಭಿಕ್ಷೆಯ ನಾಗಪಾತ್ರೆಯನ್ನು ಕಟ್ಟಿ ಕೊಂಡು ಬೆಟ್ಟವೇರಿ ಹೂಗೊಪ್ಪಲಿನ ತಿರುಪು ಹಾದಿಯಲ್ಲಿ ತಮ್ಮ ಮನೆಯ ಕಡೆಗೇ ಬರುತ್ತಿದ್ದಾನೆ....ಯಾವನಿರಬಹುದು ಎಂದು ಬೆನಮ ಯೋಚಿಸು ತ್ತಿರುವಷ್ಟರಲ್ಲಿ ಆತ ಸನಿಹಕ್ಕೇ ಬಂದನು....ಬೇಡಬಂದವನಿರಬೇಕು....ಆ ಜಂಗಮ ಮನೆಬಾಗಿಲು ಸೇರುವಷ್ಟರಲ್ಲೇ ಕೂಗಿ ಕೇಳಿದ ಬೆನಮ:

ಹೂವಗೊಪ್ಪಲ ದಾಟ ಮಠಕೆ ಬರುವವನ್ಯಾರೊ
ಬೇಡಬಂದೆಯೇನೊ ಜಂಗಮ
ಬೇಡ ಬಂದೆಯೇನೊ ಜಂಗಮ ಮನೆಯೊಳಗೆ
ನೀಡುವ ತಾಯಿ ಎದುರಿಲ್ಲ

........ಪಾಪ, ಆ ಪೋರನಿಗೇನು ಗೊತ್ತು? ಬಂದವ ಜಂಗಮನಲ್ಲ,

ಶಿವ....ತನ್ನ ಅನಿವಾರ್ಯ ಕಾರ್ಯಗಳಿಂದಾಗಿ ಮನೆಗೆ ಮರುಳವುದು ಇಷ್ಟು ತಡವಾಗಿಹೋಯಿತು ; ಮುದ್ದು ಮಡದಿ ತನಗಾಗಿ ಹಂಬಲಿಸಿ ಹಂಬಲಿಸಿ ಎಷ್ಟು ಸೊರಗಿಹೋದಳೋ ; ಅವಳನ್ನು ಸಂತೈಸುವುದು ಹೇಗೆ? ಅದಿರಲಿ ಮೊದಲು ಮುಖತೋರಿಸುವುದು ಹೇಗೆ?–ಮುಂತಾಗಿ ಅಲೋಚಿಸುತ್ತ ಬೇಗ ಮನೆಯಕಡೆ ಧಾವಿಸುತ್ತಿದ್ದ ಶಿವನಿಗೆ ಆಶ್ಚರ್ಯವಾಯಿತು. ತನ್ನ ಮನೆಗ್ನೆ ತಾನು ಬಂದರೆ, ಈ ಅಪರಿಚಿತ ಪೋರ, ಬೇಡಬಂದೆಯೇನು ಎಂದು ಪ್ರಶಿ ಸುತ್ತಾನೆ....ಯಾರಿರಬಹುದು ಈತ? ಇಲ್ಲಿಗೇಕೆ ಬಂದಿರಬಹುದು?........ ಬಾಗಿಲಿಗೆ ಬಂದು ನಿಂತು ಮುಗುಳುನಗುತ್ತ ಕೇಳಿದ ಶಿವ :

ಮೀಸೆಮೂಡದ ಪೋರ ಯಾರೊ ಆ ನಿನ ತಾಯಿ
ಇಷ್ಟ್ಯಾಂಗೆ ಬಂದು ಇಳಿದಳೊ

—ಬೆನಮಯ್ಯನಿಗೆ ಕೋಪಬಂದಿತು, ಆಶ್ಚರ್ಯವೂ ಆಯಿತು. ಯಾವುದೋ ಬೀದಿಯ ಜಂಗಮ, ತನ್ನ ಮನೆಗೆ ಬಂದು ತನ್ನನ್ನೆ ಗದ್ದರಿಸು ತ್ತಿದ್ದಾನೆ. ಕೊಟ್ಟಲ್ಲಿ ಕೊಂಡು ಮುಂದೆ ಸಾಗುವುದು ಬಿಟ್ಟು, ತನ್ನ ಸುದ್ದಿ ತನ್ನ ತಾಯಿಯ ಸುದ್ದಿ ಈ ಭಿಕಾರಿಗೇಕೆ?

ಬೀದಿ ಜಂಗಮ ನಿನಗೆ ಊರ ಸುದ್ದಿ ಯಾಕೋ
ನೇರ ಹಾದ್ಯುಂಟು ನಡೆ ಮುಂದೆ

—ಅಬ್ಬಬ್ಬ ಪೋರ! ಮೂರು ಜೋಟು ಉದ್ದವಿಲ್ಲ, ಎಷ್ಟು ಸೊಕ್ಕು! ....ಇಷ್ಟು ಹೊತ್ತಾದರೂ ಗೌರಿ ಬರಲಿಲ್ಲ. ಈ ಗದ್ದಲ ಕೇಳಿಯಾದರೂ ಹೊರಗೆ ಬರಬೇಕಿತ್ತು........ಒಮ್ಮೆ........ನಿಜ, ಆಕೆ ವಿರಹದಿಂದ ಸೊರಗಿ ಮಲಗಿಬಿಟ್ಟಿರಬಹುದು....ಈ ಮಾತುಗಳನ್ನೆಲ್ಲ ಕೇಳಲು ಆಕೆಗೆ ಎಚ್ಚರಕೂಡ ಇದೆಯೋ ಇಲ್ಲವೊ...ಸಂಜೆ ಬಂದೀರಾ, ಮುಂಜಾವ ಬಂದೀರಾ ಎಂದು ಹೊರಡುವಾಗಲೇ ಕೇಳಿದ್ದಳು....ತಾನು ಹೊರಟು ಮೂರು ತಿಂಗಳು ಕಳೆದು ಹೋದವು....–ಈ ಪೋರ ಏಕೆ ಇಲ್ಲಿ ಬಂದಿರಬಹುದು?........ ತಾಯಿಯ ಸುದ್ದಿ ಹೇಳುತ್ತಾನೆ ಬೇರೆ. ಆಕೆ ಯಾರಿರಬಹುದು?........ ತನ್ನ ಮನೆ ಬೇರೆಯವರದಾಗಿಬಿಟ್ಟಿತೇನು?....ಹಾಗಿದ್ದರೆ ಗೌರಿ........ ಮುಂದಿನ ಯೋಚನೆ ಮಿಂಚಿ ಶಿವ ಕಂಪಿಸಿ ಕೂಗಿದ :

ಹೆಚ್ಚು ಮಾತಾಡಿದರೆ ತಲೆಯ ಕೊಯ್ದಿಟ್ಟೇನು
ಹೊಸ್ತಿಲ ದಾಟ ಹೊರನಿಲ್ಲು

ಬೆನಮಯ್ಯನಿಗೂ ಕೋಪ ಏರಿತು. ಟೊಂಕದ ಕತ್ತಿ ಸೆಳೆದು ಎದ್ದು ಬಾಗಿಲಿ ಗಡ್ಡ ನಿಂತು ಗರ್ಜಿಸಿದ:

ಹೊಸ್ತಿಲ ತುಳಿದರೆ ಕಡಿಗಾಲು ಬಿದ್ದಾವು
ನನ್ನಾಣೆ ನನ್ನ ತಾಯಾಣೆ

ಇನ್ನೇನು ಒಳಕ್ಕೆ ಧಾವಿಸಬೇಕೆಂದಿದ್ದ ಶಿವರಾಯ. ಅಷ್ಟರಲ್ಲಿ ಈ ಚೋಟು ದ್ದದ ಪೋರ ಕತ್ತಿ ಹಿಡಿದು ಅಡ್ಡ ನಿಂತಿದ್ದಾನೆ....ಮೆಯ್ ಹಂದರವಾಗಿ ಕಣ್ಣೊಂದರಲ್ಲಿ ಮಾತ್ರ ಪ್ರಾಣ ಮಿಂಚುತ್ತಿದ್ದ ಗೌರಿಯ ಚಿತ್ರ ಶಿವನನ್ನು ಏನೋ ಮಾಡಿಬಿಟ್ಟಿತ್ತು.

ಮೈಯೆಲ್ಲ ನಡುಗ್ಯಾವೊ ಶಿವರಾಯಗೆ
ರೋಷವೆ ಬಂದಿತೊ ಶಿವರಾಯಗೆ
ಕಣ್ಣು ಕೆಂಗೆಂಡವೊ ಶಿವರಾಯಗೆ
ಕೋಪವೆ ಉಕ್ಕಿತೊ ಶಿವರಾಯಗೆ
ಮೀಸೆ ಮಸೆದಾಡ್ಯಾವೊ ಶಿವರಾಯಗೆ
ಸಿಟ್ಟೆ ಉರಿದಿತೊ ಶಿವರಾಯಗೆ

ಅಬ್ಬಬ್ಬ! ಏನು ಭಯಂಕರ! ನಿಜವಾಗಿಯೂ ಪ್ರಲಯರುದ್ರ!.... ಇದೇನು, ಏನು ಮಾಡುತ್ತಿದ್ದಾನೆ ಶಿವ?....ಅಯ್ಯೋ....

ಸೊಂಟಕೆ ಕೈಯಿಟ್ಟ ಶಿವರಾಯ
ಕತ್ತಿಯ ಸೆಳೆದನೊ ಶಿವರಾಯ
ಕತ್ತಿಯ ಸೆಳೆದನೊ ಶಿವರಾಯ
ಕಡಿದಲೆ ಕೆಡಹ್ಯಾನೊ ಶಿವರಾಯ

ಅಯ್ಯೋ, ಎಂತಹ ಪ್ರಮಾದ! ಕೋಪದ ಭರದಲ್ಲಿ ಆಗಬಾರದ್ದು ಆಗಿ ಹೋಯಿತು. ಬೆನಕನ ತಲೆ ಕತ್ತರಿಸಿ ನೆಲಕ್ಕುರುಳಿತು....

ಸಪ್ರಂತ ನಡೆದನೊ ಶಿವರಾಯ ಒಳಗೆ
ಬಿರ‍್ರಂತ ಬಂದಳೊ ಗೌರಮ್ಮ ಹೊರಗೆ

ಈತ ಒಳನುಗ್ಗಿದ. ಅಷ್ಟರಲ್ಲೆ, ಆಕೆ ಗದ್ದಲ ಕೇಳಿ ಬೇಗ ಜಳಕ ಮುಗಿಸಿ ಹೊರಗೆ ಧಾವಿಸಿದಳು....—ಇದೇನು ನೋಡುತ್ತಿದ್ದಾಳೆ ಆಕೆ?....ಕಣ್ಣು ಮಾಯಕ ಮಾಡುತ್ತಿಲ್ಲವಷ್ಟೆ?....

ಪತಿದೇವ ಬಂದು ನಿಂತಿದ್ದಾನೆ, ಜಿನಕನ ತಲೆ ಕಡಿದು ನೆಲದ ಮೇಲೆ ಉರುಳುತ್ತಿದೆ. ರಕ್ತ ಏಕಪ್ರಕಾರವಾಗಿ ಚಿಮ್ಮಿ ಹರಿಯುತ್ತಿದೆ!....

ಅಯ್ಯೋ ಏನಾಗಿಹೋಯಿತು? ಇದೇನಾಯಿತು? ಏನಾಗಿ ಬಿಟ್ಟಿತು??....

ಆಕೆ ಕೇಳಿದಳು, ಶಿವರಾಯ ಹೇಳಿದ; ಮತ್ತೆ ಆಕೆ ಹೇಳಿದಳು ಶಿವರಾಯ ಕೇಳಿದ....ಅವರಿಬ್ಬರಿಗಲ್ಲದೆ ಬೇರೆಯವರಿಗೆ ತಿಳಿಯುವಂತಿರಲಿಲ್ಲ ಆ ಮಾತು....ಕಣ್ಣು ತುಂಬಿ ಏಕ ಪ್ರಕಾರ ಹರಿದಿರಲು, ಗಂಟಲು ಕಟ್ಟಿ ದನಿ ಸತ್ತಿರಲು, ಮೆಯ್ ಮರವಾಗಿ ಕಂಪಿಸುತ್ತಿರಲು,—ಆ ನೀರವ ಕೋಲಾಹಲದಲ್ಲಿ ಹೇಗೋ ಒಬ್ಬರೊಬ್ಬರ ಮಾತನ್ನು ಕೇಳಿಕೊಂಡರು. ಆದುದರ ಅಂವಾಗಿತ್ತು.

ಆಳಲಿಟ್ಟಳು ಗೌರಿ ನಂಬಿಸಿದ ಶಿವರಾಯ
ಗೋಳಿಟ್ಟಳು ಗೌರಿ ರಂಬಿಸಿದ ಶಿವರಾಯ
ನೆಲಕೆ ಬಿದ್ದಳು ಗೌರಿ ಎತ್ತಿ ಸಾವರಿಸಿದ
ಬಿದ್ದು ಹೊರಳಾಡ್ಯಾಳು ತೊಡಗಿಟ್ಟು ತಾಳೆಂದ

ಎಷ್ಟು ನಂಬಿಸಿದರೇನು ರಂಬಿಸಿದರೇನು—ಹೆಣ್ಣು ಕರುಳು ಆ ದುಃಖವನ್ನು ನುಂಗಬಲ್ಲದೆ?

ಏನು ಹೇಳಿದರಿಲ್ಲ ಎಷ್ಟು ಹೇಳಿದರಿಲ್ಲ
ಸ್ವಾತಿಯ ಮಳೆಹಂಗೆ ಸುರಿದವೊ ಕಣ್ಣೀರು

ಈಕೆಯನ್ನು ಸಾಂತ್ವನಗೊಳಿಸುವುದು ಅಸಾಧ್ಯ! ಏನು ಮಾಡುವುದು? ತನ್ನ ಮುದ್ದಿನ ರಾಣಿ ಹೀಗೆಯೇ ಎದೆ ಬಿರಿಯುವಂತೆ ಆಳುತ್ತ ಕುಳಿತು ಬಿಟ್ಟರೆ ಆಕೆಯ ಗತಿ?....ತನ್ನಗತಿ....

....ಶಿವ ಏನನ್ನೋ ಯೋಚಿಸಿದ. ಗೌರಿಯನ್ನು ಮೆಲ್ಲಗೆ ತನ್ನ ತೊಡೆಯಮೇಲೆ ಕೊಂಡು ಹೇಳಿದ:

ಉತ್ತರ ದಿಕ್ಕಿಗೆ ನಡೆಯೇ ನನ ಗೌರಿ
ಸಿಕ್ಕ ತಲೆಯನೊಂದ ಕಡಿದು ತಾರೆ ಗೌರಿ
ಸಿಕ್ಕಿದ ತಲೆಯ ತಾ ಬ್ಯಾಗ ನನ ಗೌರಿ
ಬದುಕ್ಯಾನು ಬೆನಮಯ್ಯ ಬ್ಯಾಗನೋಡೆ ಗೌರಿ

—ಶಿವನ ಮಾತು ಕೇಳಿ ಜಗ್ಗನೆದ್ದಳು ಗೌರಿ. ಹೋದ ಪ್ರಾಣವೇ ಮರಳಿ ದಂತಾಯಿತು ಆಕೆಗೆ. ಇಷ್ಟು ಹೊತ್ತು ಅಸುಗುಂದಿ ನೆಲಕ್ಕೆ ಉರುಳಿದ್ದ ವಳಿಗೆ ಅದೆಲ್ಲಿಂದ ಸತ್ತ್ವ ಬಂದಿತೋ—

ಏರುತಲಿಳಿಯುತ ಓಡಿದಳೊ ಗೌರಿ
ಜಾರುತಲೆಡವುತ ಓಡಿದಳೊ ಗೌರಿ
ಉತ್ತರದಿಕ್ಕಿಗೆ ಓಡಿದಳೊ ಗೌರಿ

ಏನೊಂದರ ಅರಿವಿಲ್ಲದೆ ಉನ್ಮತ್ತಳಾಗಿ, ಕಿವಿಯಲ್ಲಿ ಗಾಳಿಹೊಕ್ಕ ಎಳೆಗರುವಿ ನಂತೆ ಓಡಿದಳು ಗೌರಿ.

ಏಳು ಗುಡ್ಡ ದಾಟಿ ಓಡಿದಳೊ ಗೌರಿ
ಮನುಜರ ಸುಳಿವಿಲ್ಲ ತಲೆಯ ಕಾಣಳೊ ಗೌರಿ

ಯೋಜನಯೋಜನ ದೂರ ಓಡಿದಳು. ಬೆಟ್ಟ ತಗ್ಗುಗಳನ್ನು ಗಣಿಸದೆ ಕಾಡು ಹೊಳೆಗಳನ್ನು ಲೆಕ್ಕಿಸದೆ ಏಕ ಪ್ರಕಾರ ಓಡಿದಳು. ಎಷ್ಟು ಓಡಿದರೂ ಮನುಷ್ಯರ ಸುಳಿವಿಲ್ಲ. ಕಣ್ಣು ಹಾಯುವಷ್ಟು ದೂರವೂ ನಿರ್ಜನವನ, ನಿರ್ಜನ ಪರ್ವತಪಙ್ತಿ....ದೇಹ ದಣಿದಿತ್ತು. ಒಣಮರಕ್ಕೆ ಹತ್ತಿದ ಬೆಂಕಿಯಂತೆ ಚಿತ್ತಕ್ಕೆ ಮರುಳಡಸಿತ್ತು....ಇನ್ನೂ ಎಷ್ಟೆಂದು ಓಡಿಯಾಳು ಆ ಅಬಲೆ?....ಹತಾಶಳಾಗಿ, ದೇಹದಲ್ಲಿ ಶಕ್ತಿಯುಡುಗಿ ನೆಲಕ್ಕೆರಗಲಿದ್ದಳು ಗೌರಿ....ಆದರೆ, ಅಷ್ಟರಲ್ಲಿ ಆಕೆಯ ಪುಣ್ಯ–

ಏಳು ಗುಡ್ಡ ದಾಟಿ ಕೀಳು ಗುಡ್ಡದ ಬದಿಗೆ

ಏನೋ ಸಪ್ಪಳ ಕೇಳಿಸಿತು ; ತುಂಬು ಪೊದರೊಂದು ಅಲುಗುತ್ತಿತ್ತು. ಅತ್ತ ಧಾವಿಸಿದಳು ಗೌರಿ. ಅಲ್ಲಿ,

ಆನೆಯ ಮರಿಯೊಂದು ಆಡುತ ಮಲಗಿತ್ತು

ಮನುಷ್ಯನೆಂದು ಆಸೆಮಾಡಿ ಧುಮುಕಿದರೆ, ಆನೆಯ ಮರಿ....ಮತ್ತೆ ನಿರಾಶೆ....ಇನ್ನೊಮ್ಮೆ ಯೋಚಿಸಿದಳು ಗೌರಿ. ಮುಂದೆ ಓಡಲು ಅಸಾಧ್ಯ. ಒಮ್ಮೆ ಪ್ರಾಣಬಿಟ್ಟು ಓಡಿದರೂ ಯಾರೊಬ್ಬ ದೊರೆತಾನೆಂಬ ಭರವಸೆ ಯೆಲ್ಲಿ?....ಸಿಕ್ಕದ್ದೇ ಆಯಿತು. ಗೌರಿ ತಡಮಾಡಲಿಲ್ಲ.

ಆಡುವಾನೆಯ ಮರಿಯ ತಲೆಯ ಕೊಯ್ದಳು ಗೌರಿ
ತಲೆಯ ಕೊಂಡಳು ಗೌರಿ ಓಡಿ ಬಂದಳು ಮನೆಗೆ

—ಇಲ್ಲಿ ಮನೆಯಲ್ಲಿ, ಆಕೆಯ ಬರವನ್ನೆ ಕಾಯುತ್ತ ಚಿಂತಿಸುತ್ತ ಶಂಕಿಸುತ್ತ ತನ್ನನ್ನೆ ಶಪಿಸಿಕೊಳ್ಳುತ್ತ ನಿಂತಿದ್ದ ಶಿವ. ಗೌರಿ ಓಡಿಬರುತ್ತಿದ್ದುದನ್ನು ಕಂಡು ಆನಂದವಾಯಿತು ಆತನಿಗೆ....ಮತ್ತೊಮ್ಮೆ ನೋಡಿದ. ಗೌರಿ ಬರಿಗೈಯ್ಯಲ್ಲಿ ಬರುತ್ತಿರಲಿಲ್ಲ....ಆದರೆ?....ಹತ್ತಿರದಿಂದ ನೋಡಿದ ಶಿವ.... ಆನೆಯ ಮುಖ...ಏನೇ ಆದರೂ ಚಿಂತಿಸಲು ಸಮಯವಿಲ್ಲ. ವಿಲಂಬವಾದರೆ ತನ್ನ ಮಡದಿ....ಮುಂದೆ ಯೋಚಿಸುವುದಾಗಲಿಲ್ಲ....ಒಡನೆಯೇ ಗೌರಿಯ ಕೈಯಿಂದ ತಲೆಯನ್ನು ಸೆಳೆದುಕೊಂಡ.

ಬೆನವುನ ಕೊರಳಿಗೆ ಆನೆಯ ತಲೆಯ
ಆನೆಯ ತಲೆಯ ಹಚ್ಯಾನೊ ಶಿವರಾಯ
ಬೂದಿ ತಳಿದ ಶಿವ ಉಸಿರೂದಿದ ಶಿವ

ಬದಿಯಲ್ಲಿ, ಉಸಿರಾಡಿಸದೆ ಮೆಯ್ಯೆಲ್ಲ ಕಣ್ಣು ಮಾಡಿಕೊಂಡು ಕಾಯುತ್ತ ನಿಂತಿದ್ದಳು ಗೌರಿ. ಮರುಕ್ಷಣದಲ್ಲಿ,

ಬೆನಕ ತಲೆಯಾಡಿಸಿ ಮ್ಯಾಲೆದ್ದು ನಿಂತನೊ
ಆನೆ ತಲೆಯಾಡಿಸಿ ಮ್ಯಾಲೆದ್ದು ನಿಂತನೊ

ಗೌರಿಯ ಸಂತಸ ಹೇಳುವಷ್ಟಲ್ಲ. ಚಿಕ್ಕ ಮಗುವಿನಂತೆ ಕುಣಿದುಬಿಟ್ಟಳು. ಆಕೆಯ ಕಣ್ಣುಗಳು ತುಂಬಿ ಚೆಲ್ಲಿದವು....ಒಂದು ಕ್ಷಣದಲ್ಲಿ ದಣಿವೆಲ್ಲ ಇಂಗಿ ಹೋಯಿತು....ಓಹ್, ಎಂತಹ ಆನಂದ ಅದು!

....ಮತ್ತೆ ಎಷ್ಟೋ ಹೊತ್ತಿನಮೇಲೆ, ಬೆಳ್ಳಿ ಬೆಟ್ಟದ ಹೂಗೊಪ್ಪಲಿನ ಏಳುಪ್ಪರಿಗೆಯ ತುದಿಯಲ್ಲಿ, ಶಿವ ಗೌರಿಯರು ಚದುರಂಗವಾಡತೊಡಗಿದ್ದರು. ಆಟದಲ್ಲಿ ಗೆದ್ದೆನೆಂದು ಗೌರಿ ದೊಡ್ಡದಾಗಿ ನಕ್ಕಳು. ಬದಿಯಲ್ಲೆ ಕುಳಿತಿದ್ದ ಬೆನಮ ಕೈತಟ್ಟಿ ಕುಣಿಯತೊಡಗಿದ. ಶಿವಗೌರಿಯರಿಬ್ಬರೂ ಆತನನ್ನು ನೋಡುತ್ತ ಆಟವನ್ನು ಮರೆತರು....ಕೊನೆಯಲ್ಲಿ, ಕಣ್ಣು ತುಂಬುತ್ತಿರಲು ತುಂಬುಗೊರಳಿನಲ್ಲಿ ಗೌರಿ ಹೇಳಿದಳು:

ಮಣ್ಣು ಕೊಟ್ಟಿತು ನೆಲ ಶರಣೆಂಬೆ
ತನ್ನ-ತಲೆಯ ಕೊಟ್ಟ ತಾನೆ ಶರಣೆಂಬೆ
ಮಗನ ಕೊಟ್ಟರಿ ಶಿವನೆ ಶರಣೆಂಬೆ
ಮೂ-ಜಗವ ಕೊಟ್ಟರಿ ಶಿವನೆ ಶರಣೆಂಬೆ

—ಶಿವಪಾರ್ವತಿಯರ ಒಲವಿನ ಮೊದಲ ಮೀಸಲನ್ನು ಕೊಂಡ ಗಜಮುಖ ಸಂಪೂರ್ಣವಿಶ್ವದ ಮೊದಲಮೀಸಲನ್ನು ಕೊಳ್ಳುತ್ತಿದ್ದಾನೆ. ಪೂಜಾಪ್ರಪ್ರಥಮನಾದ ಆ ದೇವಪುತ್ರ ನಮ್ಮ ಮೇಲೆ ಸದಾ ತನ್ನ ಕರುಣೆಯನ್ನು ಹರಿಸುತ್ತಿರಲಿ.

---

## ೪. ಹೂವಿಗೂ ಹೆಣ್ಣಿಗೂ ಸೂತಕಿಲ್ಲೆಲೆ ಬಾಲೆ

ತನ್ನನ್ನೆ ಕುರಿತು ಕಠಿನ ತಪಸ್ಸು ಮಾಡಿದ ಚೆಲುವೆ ಗೌರಿಯನ್ನು ಶಿವ ಮದುವೆಯಾದ ಅನಂತರ, ಬೆನಮಯ್ಯ ಹುಟ್ಟಿದ ಕೆಲವು ದಿನಗಳಲ್ಲೆ ಶಿವಸಂಸಾರದಲ್ಲಿ ಮತ್ತೊಂದು ಕಥೆ ನಡೆಯಿತು........

ಏಳು ಸುತ್ತಿನಗಳ ಆರು ಸುತ್ತಿನ ಕೋಟೆ
ಮಡದಿ ಗೌರಿಗೆ ಮನೆ ಕಟ್ಟ
ಹತ್ತು ಸುತ್ತಿನ ಗೋಡೆ ಸುತ್ತೆಲ್ಲ ಬಾಗಿಲು
ಮಡದಿ ಗೌರಿಗೆ ಮಠ ಕಟ್ಟ
ಮಡದಿ ಗೌರಿಗೆ ಮಠ ಕಟ್ಟ ಶಿವ ತಾನು
ಹೊರಟನು ಗೋವೆ ಪರನಾಡು

ಅದೇನು ಕಾರ್ಯವೊ—ಯಾರು ಬಲ್ಲರು? ಒಟ್ಟಿನಲ್ಲಿ ಶಿವರಾಯನಿಗೆ ಸದಾ ತಿರುಗುತ್ತಿರಬೇಕು. ಮನೆಯಲ್ಲಿ ಒಂದು ತಿಂಗಳಿದ್ದರೆ ಮತ್ತೆರಡು ತಿಂಗಳು ಸಂಚಾರ........ದೂರ ದಕ್ಷಿಣದಲ್ಲಿರುವ ಗೋವೆಗೆ ಹೊರಟ ಶಿವ ಮಡದಿಗೆ ಎಚ್ಚರಿಕೆ ಹೇಳಿದ :

ಹೋಗುವೆ ಗೋವೆ ಪರನಾಡು ಸಿರಿಗೌರಿ
ನೀ ಜೋಕೆ ನಿನ್ನ ಮಗ ಜೋಕೆ

ತಾಯಿ ಮಗನ ಎಚ್ಚರಿಕೆ ನೋಡಿಕೊಂಡರೆ, ಮಗ ಮನೆಯ ಎಚ್ಚರಿಕೆ ನೋಡಿಕೊಳ್ಳಬೇಕು.

ಹೋಗುವೆ ಗೋವೆ ಪರನಾಡು ಬೆನಮಯ್ಯ
ನೀ ಜೋಕೆ ನಿನ್ನ ಮನೆ ಜೋಕೆ
ಮಾಳಿಗೆ ಮನೆ ಜೋಕೆ ಜೋಳಿಗೆ ಹೊನ್ನು ಜೋಕೆ
ನೀ ಜೋಕೆ ನಿನ್ನ ಗುಣ ಜೋಕೆ

ಮಾಳಿಗೆ ಜೋಳಿಗೆಗಳ ಸಂಗಡ ಗುಣವೂ ಜೋಪಾನ—ಎಂದು ಎಚ್ಚರಿಸಿದ ಶಿವ, ತುಂಟ ಬೆನಮಯ್ಯನಿಗೆ.

ಎತ್ತನ್ಹತ್ತಿಕೊಂಡು ಮುತ್ತ ಸೂಡಿಕೊಂಡು
ಹೊರಟನೋ ಗೋವೆ ಪರನಾಡು

........ಮನೆಬಿಟ್ಟು ಹತ್ತುಮಾರು ದೂರ ಹೋಗಿರಬೇಕು ಶಿವ. ಅಷ್ಟರಲ್ಲಿ, ಹಿಂದಿರುಗಿ ನೋಡಿದರೆ ತನ್ನ ಬೆನ್ನಿನಲ್ಲಿಯೇ ಓಡಿಬರುತ್ತಿದ್ದಾನೆ ತುಂಟ ಬೆನಮು....ಬೇಡ ಎಂದು ಎಷ್ಟು ಹೇಳಿದರೂ ಕೇಳಲಿಲ್ಲ, ತಾನೂ ತಂದೆಯ ಕೂಡ ಬರುತ್ತೇನೆಂದು ಹಟಮಾಡತೊಡಗಿದ.

ಬಂದ ಬೆನಮಯ್ಯನ ಹಿಂದಕ್ಕೆ ದಬ್ಬಿದ
ಎತ್ತೇರಿ ಪಯಣ ಬೆಳಸಿದ

ಕೆಂಜೆಡೆಯನ್ನು ಅಂದವಾಗಿ ಕಟ್ಟಿ ಪಂಚವರ್ಣದ ನಂದಿಯನ್ನೇರಿ ಪ್ರಯಾಣ ಹೊರಟ ಶಿವನ ಚೆಲುವನ್ನು ನೋಡಬೇಕು :

ಹಂಡನ್ಹತ್ತಿಕೊಂಡು ಕೆಂಜಡೆ ಸುತ್ತಿಕೊಂಡು
ಹಂಡಂಗೆ ನೀರ ಕುಡಿಸುತ
ಹಂಡಂಗೆ ನೀರ ಕುಡಿಸುತ ಶಿವ ತಾನು
ಹೊರಟನೊ ಗೋವೆ ಪರನಾಡು

ತನ್ನ ಊರು ಒಂದು ತುದಿಯಲ್ಲಿದ್ದರೆ ಗೋವೆ ಇನ್ನೊಂದು ತುದಿಯಲ್ಲಿದೆ. ಹಾದಿಯೇನು ಸ್ವಲ್ಪದೂರವೆ?

ಎತ್ತೇರಿ ಪಯಣ ಬೆಳಸಿದ ಶಿವರಾಯ
ತಂಬೆತ್ತಿ ತಂಬು ಹೊಡೆಸಿದ

ಒಂದೆರಡು ಪಯಣಕ್ಕಿರಲಿ, ಹತ್ತೆಂಟು ಪಯಣಕ್ಕೂ ಮುಗಿಯದ ದಾರಿ. ತಿಂಗಳು ತೀರುವನಕ ಸಾಗಿದರೂ ಕೊನೆಯಾಗದು. ದಿನದಿನಕ್ಕೆ ಅಲ್ಲಲ್ಲಿ ತಂಬು ಹೊಡೆಸಿ, ವಿಶ್ರಮಿಸಿ ಮತ್ತೆ ಮುಂದೆ ಸಾಗಬೇಕು ...ತಂಬು ಕಿತ್ತು ತಂಬು ಊರಿ ಹಲವು ದಿನಗಳ ಪಯಣ ಸಾಗಿತು. ಕೊನೆಗೊಂದು ದಿನ,

ತಂಬೆತ್ತಿ ತಂಬು ಹೊಡೆಸಿದ ಶಿವರಾಯ
ಗಂಗಿದ್ದ ಬಳಿಗೆ ಉದಯಾದ

—ಒಂದು ಚೆಲುವಾದ ಸಂಜೆ, ಸೂರ್ಯ ಅಸ್ತಮುಖನಾಗಿ ಭೂಮಿಯನ್ನು ರಂಗಿಸಿರಲು ಶಿವ ಗಂಗಾನದಿಯ ತೀರದ ಬಳಿಯನ್ನು ಸೇರಿದ.

ಆ ರಾತ್ರಿ ಶಿವ ಅಲ್ಲಿ ತಂಗಿದ. ಮಾರನೆಯ ದಿನ ಬೆಳಗಾಗಲು ನದಿಯನ್ನುದಾಟುವ ಸಲುವಾಗಿ ಅಲ್ಲಿನ ಹಳ್ಳಿಯ ಜನರನ್ನು ಅಂಬಿಗರೆಲ್ಲಿರುವರು

ಎಂದು ಕೇಳಿದ. ಹಳ್ಳಿಯ ಜನರೆಲ್ಲ ಆಶ್ಚರ್ಯಪಟ್ಟರು. ಯಾರಿರಬಹುದು ಈತ? ಮುಖದಮೇಲೆ ರಾಜಕಾಂತಿ; ರಾಜದರ್ಪ. ಯಾವ ನಾಡಿನ ದೊರೆ ಇರಬಹುದು? ಏಕಾಂತವಾಗಿ ಬಂದು ಇಲ್ಲೇಕೆ ಬೀಡುಬಿಟ್ಟಿದ್ದಾನೆ? —ಏನೋ!........ಈಗ ಈತನನ್ನು ಹೊಳೆಯಾಚೆ ಸಾಗಿಸಬೇಕಲ್ಲ. ಅಂಬಿಗರೆಲ್ಲ ಎತ್ತೆತ್ತಲೋ ಹೋಗಿಬಿಟ್ಟಿದ್ದಾರೆ.

ಯಾವೂರ ದೊರೆ ಬಂದು ಬೀಡ ಬಿಟ್ಟೈದಾನೆ
ದೋಣಿನ್ಹಾಕವರು ಗಿಡಪಾಲು
ಯಾವೂರ ದೊರೆ ಬಂದ ತಂಬು ಹೊಡೆದೈದಾನೆ
ಹರಿಗೋಲ್ಹಾಕವರು ಗಿಡಪಾಲು

ಆದರೆ ಶಿವನ ಅದೃಷ್ಟ!—

ಹರಿಗೋಲ್ಹಾಕವರು ಗಿಡಪಾಲಾಗ್ಹೋದರು
ಗಂಗೆ ಒಬ್ಬಳೆ ಉಳಿದಳು

ಒಬ್ಬಳೇ ಇದ್ದ ಗಂಗೆಯನ್ನು ತೋರಿಸಿ ಜನ ತಮ್ಮ ಹಾದಿ ಹಿಡಿದರು. ಅಲ್ಲಿಯೇ ತುಸು ದೂರದಲ್ಲಿ ಹೊಳೆಯ ದಡದ ಬಳಿ ಏಕಾಂಗಿಯಾಗಿ ನಿಂತಿದ್ದಾಳೆ ಆ ಹರೆಯದ ಹುಡುಗಿ. ಶಿವ ಆಕೆಯ ಸಮೀಪ ಸಾರಿದ. ಕಿರಿನೀರಿನಲ್ಲಿಳಿದು ಹೂವಾಯುತ್ತಿದ್ದ ಹುಡುಗಿ ಶಿವ ಸಮೀಪ ಬಂದುದನ್ನು ಕಂಡು ಇತ್ತ ತಿರುಗಿದಳು. ಟೊಂಕದಮೇಲೆ ಕೈಯಿಟ್ಟು ಬಿಂಕದಿಂದ ಚೆಲ್ಲಿದ ಆ ನೋಟದಲ್ಲಿ ಅದೇನು ಹರೆಯದ ಗರ್ವ! ಆಕೆಯ ತುಂಬು ಮಾಟವನ್ನು ಕಣ್ಣುತುಂಬ ತುಂಬಿಕೊಂಡ ಶಿವ ಮನಸ್ಸಿನಲ್ಲೆ ಮುಗುಳು ನಗುತ್ತಾನೆ........ ಆಕೆ ಬಲಗೈಯಲ್ಲಿ ಮುಷ್ಟಿತುಂಬ ಹಿಡಿದ ಕೋಳೆ ಹೂಗಳನ್ನು ನೋಡುತ್ತ ಶಿವ ಕೇಳುತ್ತಾನೆ:

ಹೊಳೆಯ ಹೊದ್ದೀಲೆ ಬಿಳಿಯ ಹೂ ಕೊಯ್ಯೋಳೆ
ಹೂವಿದ್ದರೆ ಕೊಡೆ ದರುಶನಕೆ

ದರ್ಶನಕ್ಕಾಗಿ ಹೂವು ಬೇಕಂತೆ! ಯಾರ ದರ್ಶನಕ್ಕೆ?—ಹೂವಿನ ದರ್ಶನಕ್ಕಾಗಿಯೇ ಇರಬಹುದು!

ನೀವು ಜಂಗಮರಯ್ಯ ನಾನು ಬೋವೇರ್ಹುಡುಗಿ
ನನ್ನ ಕೈ ಹೂವು ನಿಮಗಾಗ

ಎನ್ನುತ್ತಾಳೆ ಆ ಹುಡುಗಿ, ಗರ್ವ ಮಾಸದ ದಿಟ್ಟತನದಿಂದ. ಶಿವ ಅದಕ್ಕೆ ಉತ್ತರವನ್ನು ಸಿದ್ಧಪಡಿಸಿಕೊಂಡೇ ಇದ್ದಾನೆ :

ಹೂವಿಗೂ ಹೆಣ್ಣಿಗೂ ಸೂತಕಿಲ್ಲೆಲೆ ಬಾಲೆ
ಹೂವಿದ್ದರೆ ಕೊಡೆ ದರ್ಶನಕೆ

ಗರ್ವ ಬಿಂಕಗಳೆಲ್ಲವನ್ನೂ ಮುಳುಗಿಸಿ ನಗೆ ಚಿಮ್ಮಿಬಿಟ್ಟಿತು ಆ ಹುಡುಗಿಯ ಮುಖದಲ್ಲಿ. ಮರುಕ್ಷಣ ನಾಚಿ ತಿರುಗಿದಳು........ಆಕೆ ಮೌನಳಾದಳೆಂದು ಶಿವ ಮಾತು ನಿಲ್ಲಿಸಲಿಲ್ಲ........ಹೂವು ಕೊಡುವುದಿಲ್ಲವೆ, ಬೇಡ.—

ಹೊಳೆಯ ಹೊದ್ದೀಲೆ ಕರಿಹೊಯ್ಗೆ ನಾಡೋಳೆ
ಅಡಿಕಿದ್ದರು ಕೊಡೆ ನಮುಗೊಂದು

ಇಷ್ಟು ಹೇಳಿ ಅಲ್ಲಿಯೇ ಕುಳಿತುಬಿಟ್ಟ ಶಿವ, ವೀಳ್ಯ ಮೆಲ್ಲಲು ಅಣಿಗೊಂಡ ರಸಿಕನಂತೆ........ಇದೇನೋ ಸ್ವಾರಸ್ಯವಿರುವಂತೆ ತೋರುತ್ತದೆ ಆಕೆಗೆ: ಈ ಜಂಗಮನ ರಸಿಕತೆ ಅರ್ಥವಾಗುತ್ತದೆ. ಒಂದು ಬಿಟ್ಟು ಮತ್ತೊಂದು ಕೇಳುವ ಈತನ ಕುಚೋದ್ಯಕ್ಕೆ ತಾನೂ ಕುಚೋದ್ಯದಿಂದಲೇ ಉತ್ತರಿಸಿದಳು.

ನೀವು ಜಂಗಮರಯ್ಯ ನಾನು ಬೋವೇರ್ಹುಡುಗಿ
ನನ್ನ ಕೈಯಗನಡಿಕೆ ನಿಮುಗಾಗ

ಬೇರೆ ಉತ್ತರ ಹೊಂಚಲಿಲ್ಲ ಶಿವ.

ಅಡಿಕೆಗೂ ಹೆಣ್ಣಿಗೂ ಸೂತಕಿಲ್ಲೆಲೆ ಬಾಲೆ
ಅಡಿಕಿದ್ದರು ಕೊಡೆ ನಮುಗೊಂದು

ಆಕೆ ಅಡಿಕೆ ಕೊಡಲಿಲ್ಲ, ಬದಲು ಮತ್ತೆ ನಕ್ಕು ತಿರುಗಿದಳು. ಆಕೆ ಕೊಟ್ಟುದಕ್ಕಿಂತ ಮಿಗಿಲು ಹರ್ಷದಿಂದ ಶಿವ ಮತ್ತೆ ಕೇಳಿದ :

ಹೊಳೆಯ ದಡದಾಗೆ ಎಳೆ ಹೊಂಗೆನಾಡೋಳೆ
ಎಲೆಯಿದ್ದರು ಕೊಡೆ ನಮುಗೊಂದು

ಶಿವನ ಮರುಚರಣಕ್ಕೆ ಗಂಗೆ ಪಲ್ಲವಿ ಹಾಡಿದಳು :

ನೀವು ಜಂಗಮರಯ್ಯ ನಾನು ಬೋವೇರ್ಹುಡುಗಿ
ನನ ಕೈಯಗನೆಲೆಯು ನಿಮುಗಾಗ

ಪಲ್ಲವಿಗೆ ಪಲ್ಲವಿ :

ಎಲೆಗೂ ಹೆಣ್ಣಿಗೂ ಸೂತಕಿಲ್ಲೆಲೆ ಬಾಲೆ
ಎಲೆಯಿದ್ದರು ಕೊಡೆ ನಮುಗೊಂದು

ಆಕೆ ಮಾತನಾಡಲಿಲ್ಲ. ಬದಲು ಅಲ್ಲೆ ಕುಳಿತಳು. ಸವಾಲಿಗೆ ಮರುಸವಾಲು ಕೊಟ್ಟು ಮುಂದುವರಿಸಿಯೇನೆಂಬ ಗರ್ವದಿಂದೆಂಬಂತೆ ಕಣ್ಣು ಬೀಸಿದಳು.... ಶಿವನಿಗಾದರೂ ಬೇಸರ ಬರಲು ಕಾರಣವೆಲ್ಲಿ?....ಕೊಡುಗೆ ಇಲ್ಲವಾದರೂ ಕೇಳಿಕೆ ಅರೆಯಾಗಬಾರದು. ಅದಕ್ಕೇ ಸುಣ್ಣ ಕೇಳಿದ ಶಿವ :

ಹೊಳೆಯ ಅಂಚಿನಾಗೆ ಹುಗ್ಗಾಟವಾಡೋಳೆ
ಸುಣ್ಣಿದ್ದರು ಕೊಡೆ ನಮಗೀಟು

ಹುಗ್ಗಾಟವಾಡುವವಳಂತೆ ತಾನು! ಮನವನ್ನು ಹುದುಗಿಸಿ ಮಾತಿನ ಆಟ ಆಡುತ್ತಿರುವವನು ಅವನೇ ಅಲ್ಲವೇ? ತನ್ನದು ಕೇವಲ ಆಟಕ್ಕೆ ಆಟ.

ನೀವು ಜಂಗಮರಯ್ಯ ನಾನು ಬೋವೇರ್ಹುಡುಗಿ
ನನ್ನ ಕೈ ಸುಣ್ಣ ನಿಮಗಾಗ

ಆಡಿದ ಮಾತನ್ನೆ ಮತ್ತೆ ಮತ್ತೆ ತಿರುಗಿಸಿ ಆಡುತ್ತಾರೆ! ಮಾತು ಒಂದೇ ಆದರೂ ಅರ್ಥ, ಕ್ಷಣ ಕ್ಷಣಕ್ಕೆ, ತಾನಾಗಿಯೇ ಕುಡಿವರಿಯುತ್ತ ಹೋಗುತ್ತದೆ; ಇಬ್ಬರ ಕಣ್ಣಿನ ನೆಯ್ಗೆಯ ನಡುವೆ ಹೊಸ ಬಣ್ಣವಾಗಿ ಹರಿಯುತ್ತದೆ.

ಸುಣ್ಣಕು ಹೆಣ್ಣಿಗೂ ಸೂತಕಿಲ್ಲೆಲೆ ಬಾಲೆ
ಸುಣ್ಣಿದ್ದರು ಕೊಡೆ ನಮಗೀಟು

—ಇನ್ನಾವುದಕ್ಕೆ ಸೂತಕವಿದ್ದರೂ ಹೆಣ್ಣಿಗೆ ಸೂತಕವಿಲ್ಲವೆಂಬುದನ್ನು ಮಾತು ಮಾತಿನಲ್ಲೂ ವ್ಯಕ್ತಪಡಿಸುತ್ತಾನೆ, ರಸಿಕ ಶಿವ. ನಿಜ, ಮಾಗಿದ ಹಣ್ಣಿಗೂ ಹರೆಯದ ಹೆಣ್ಣಿಗೂ ಯಾವೂರ ಸೂತಕ?

ಒಂದು ಕ್ಷಣ ಮೌನ; ಕೇವಲ ಕಣ್ಣಿನ ಕುಣಿತ.

ಮತ್ತೆ ಶಿವ ಬೇರೆ ಹಾದಿ ಹುಡುಕುತ್ತಾನೆ :

ಹೊಳೆಯ ಹೊದ್ದೀಲೆ ಮಲ್ಲಿಗ್ಹೂ ಕೊಯ್ಯೋಳೆ
ಕುಲದಾಗ್ಯಾತರ ಮಗಳಂದ

ಸರಸ ಇಲ್ಲಿಗೆ ಬಂದಿತು—ಎಂದುಕೊಂಡಳು ಗಂಗೆ. ಉತ್ತರ ಕೊಡಲು ಹಿಂದಾಗಲಿಲ್ಲ.

ಕುಲವ ಕೇಳುವಂಥ ಛಲಗಾರರು ನೀವ್ಯಾರು
ನಿಮಗ್ಯಾಕೆ ನಮ್ಮ ಕುಲಶೀಲ

ಕುಲ ಇಂಥದು ಎಂದಮೇಲೆ, ತಾನು ಏಕೆ ಕೇಳಿವೆನೆನ್ನುವುದನ್ನು ಹೇಳಿಯಾನು; ಮೊದಲೇ ಏಕೆ ಹೇಳುತ್ತಾನೆ ಆತ?........ಕುಲ ಹೇಳದಿದ್ದರೆ ಹೋಗಲಿ,—

ಹೊಳೆಯ ಹೊದ್ವೀಲೆ ಜಾಜಿ ಹೂ ಕೊಯ್ಯೋಳೆ
ಜಾತಿಲ್ಯಾತರ ಮಗಳಂದ

........–ಏಕಾಂಗಿಯಾಗಿದ್ದ ಹರೆಯದ ತನ್ನೊಡನೆ ಸರಸವಾತಿಗೆ ಪ್ರಾರಂಭಿಸಿದ ತರುಣರಸಿಕನೊಬ್ಬನನ್ನು ಉಪಾಯದಿಂದ ನಿವಾರಿಸಿಕೊಳ್ಳುವುದಕ್ಕೂ ಚಾತುರ್ಯದಿಂದ ಸ್ವಾಗತಿಸುವುದಕ್ಕೂ ಬಲ್ಲ ಜಾಣೆ ........ಎಲ್ಲೆಲ್ಲೋ ಸುತ್ತುತ್ತಿದ್ದ ಮಾತುಗಳನ್ನು ನೇರ ತಂದು ನಿಲ್ಲಿಸಿದಳು ಆಕೆ :

ಜಾತಿ ಕೇಳಂಥ ಹಟಗಾರರು ನೀವ್ಯಾರು
ಜಾತಿ ಕೇಳಿ ಹೆಣ್ಣ ಕೊಳುತೀರಾ
ಜಾತಿ ಕೇಳಿ ಹೆಣ್ಣ ಕೊಳುತೀರಾ ಜಂಗಮರೆ
ಜಾತಿಲಂಬಿಗರ ಮಗಳಂದ

—ಅಬ್ಬ, ದಿಟ್ಟೆ! ಹೆಣ್ಣನ್ನು ಕೊಳ್ಳುತ್ತೀರಾ ಎನ್ನುತ್ತಾಳೆ. 'ನಿನ್ನಂತಹ ಚೆಲುವೆ ಬರುವುದಾದರೆ ಇಲ್ಲ ಎನ್ನುತ್ತೇನೆಯೇ' ಎಂದು ತುಟಿಯೊಳಗೇ ನುಡಿದುಕೊಂಡು ಮುಗುಳುನಕ್ಕ ಶಿವ....ಈಕೆ ಕೊಟ್ಟ ಸಲುಗೆಯ ಬೆರಳು ಕೊಂಡು ಕೈಹಿಡಿಯುವ ಚದುರ ಆತ.

ಪಟ್ಟೆ ಸೀರೆಗೆ ಹೂವಿನ ದಡಿಕಂಬಿ
ಗಿಣಿಹಸಿರಿನೊಡಲು ಕೆಂಜೆರಗು
ಗಿಣಿಹಸಿರಿನೊಡಲು ಕೆಂಜೆರಗು ಸೀರೆಯ
ಇವನಾದರು ಕೊಳ್ಳೆ ಉಡು ಬಾರೆ

—ಹೆಣ್ಣು ಕೊಳ್ಳುತ್ತೇನೆ ಎಂದು ನೇರ ಹೇಳದೆ ಬಣ್ಣ ಕೊಡುತ್ತೇನೆ ಎಂದು ಕೊಂಕು ನುಡಿಯುತ್ತಾನೆ........ಹೀಗೆ ಎಷ್ಟು ಹೆಣ್ಣುಗಳನ್ನು ಮರುಳು ಮಾಡಿ ಸೆರಗಿನೊಳಗೆ ಸೇರಿಸಿಕೊಂಡಿದ್ದಾನೋ!....ತನ್ನ ಸಂಶಯವನ್ನು ಅರಿಯಲು ಹೀಗೆಂದಳು ಗಂಗೆ:

ಪಟ್ಟೆ ಸೀರೆಗೆ ಹೂವಿನ ದಡಿಕಂಬಿ
ಗಿಣಿಹಸಿರಿನೊಡಲು ಕೆಂಜೆರಗು

ಗಿಣಿ ಹಸಿರಿನೊಡಲು ಕೆಂಜೆರಗನುಡುವಂಥ
ಮಡದಿರಿಲ್ಲೇನೋ ಮನೆಯಾಗೆ

ಅವಳ ಪ್ರಶ್ನೆಗೆ ಅಪ್ರಿಯವಾದ ಉತ್ತರ ಕೊಡದೆ ತನ್ನ ಪ್ರಚೋದನೆಯನ್ನು ಮುಂದುವರಿಸಿದ ಶಿವ :

ಪಟ್ಟೆ ರವಿಕೆಯುಂಟು ಚಿಗುರಿನ ಅಂಚುಂಟು
ನೋಡಿದರೊಮ್ಮೆ ಬಿಡದಂಡ
ನೋಡಿದರೊಮ್ಮೆ ಬಿಡದಂಡದ ರವಿಕೆಯ
ಗಯ್ಯಾಳಿತನ ಬ್ಯಾಡ ಉಡು ಬಾರೆ

ನಿಜ, ಮನೆಯಲ್ಲಿ ಯಾರಿದ್ದರೆ ಈಕೆಯ ಸೀರೆಗೆ ಕೊರತೆಯೇನು? ಕೇಳ ಬಾರದುದನ್ನೆಲ್ಲ ಕೇಳುವ ಗಯ್ಯಾಳಿತನವೇಕೆ ಈಕೆಗೆ?........—ಗಯ್ಯಾಳಿ ಯಾಗಿಯೇ ಉತ್ತರಿಸುತ್ತಾಳೆ ಆಕೆ :

ಪಟ್ಟೆ ರವಿಕೆಯಿರಲಿ ಚಿಗುರಿನ ಅಂಚಿರಲಿ
ಮನೆಯಾಗಿಲ್ಲೇನೋ ಮಡದೀರು
ಮನೆಯಾಗಿಲ್ಲೇನೋ ಮಡದೀರಿಲ್ಲದಿದ್ರೆ
ಹಾಕಿಬೀಡದನು ಗಂಗೇಗೆ

ಮನೆಯಲ್ಲಿ ಮಡದಿಯರಿಲ್ಲದಿದ್ದರೆ ಗಂಗೆಗೆ ಹಾಕಬೇಕಂತೆ! ಯಾವ ಗಂಗೆಗೆ?....

....ಮಾತಿಗೆ ಮಾತು ಸವಿಯಾಗಿ ಬೆರೆಯುತ್ತ ವೇಳೆ ಕಳೆಯಿತು. ಗಂಗೆಗೆ ತನ್ನನ್ನು ಕುರಿತು ಒಲವು ಮೂಡಿತೆಂದು ಶಿವನಿಗೆ ಸಂಪೂರ್ಣ ನಿಶ್ಚಯವಾಯಿತು. ತುಂಟಿಯಾಗಿ ಮೊದಲು ಈತನ ಕೂಡ ವಾದಾಟವಾಡಿ ದವಳು ಈಗ ಮುಗ್ಧ ವಧುವಿನಂತೆ ತೋರಿದಳು. ನಗು ಮೆಲುವಾಯಿತು, ಸೂಕ್ಷ್ಮವಾಯಿತು. ಆಗ ತಾನೆ ಅರಳಿ ಸೊಕ್ಕಿದ ಹೂವಿನಂತಿದ್ದವಳು ಮಂಜು ಕವಿದಂತಾದಳು....ಎಲ್ಲವನ್ನೂ ಸೂಕ್ಷ್ಮವಾಗಿ ಗಮನಿಸಿದ ಶಿವ.

ದಿನ ಏರಿ ದಿನ ಇಳಿವ ಸಮಯ. ಮೃದುವಾಗಿ ತೀಡುತ್ತಿದ್ದ ಗಾಳಿ ಕ್ರಮಕ್ರಮವಾಗಿ ಬಿರುಸುಗೊಂಡಿತು. ಆಕಾಶದಲ್ಲಿ ತೆಳುವಾಗಿ ಚೆದುರಿದ್ದ ಮೋಡಗಳು ಒತ್ತೊಟ್ಟಿಗೆ ಒಡತೊಡಗಿದವು. ಮಳೆ ಸುರಿಯುವ ಸೂಚನೆ ಕಾಣಿಸಿತು....ಆಗಸದತ್ತ ಕಣ್ಣು ಹಾಯಿಸುತ್ತ ಶಿವ ಹೇಳಿದ :

ಗಾಳಿ ಘೋರಂದವು ಮುಗಿಲು ಮ್ಯಾಲೆರಗ್ಯಾವು
ಹರಿಗೋಲನ್ಹಾಕೆ ಹೊಳೆಗೀಗ

—ಹಾಗಾದರೆ ಇಷ್ಟೆಲ್ಲ ಆಟ ಆಡಿ ತನಗೆ ಹೊಸ ಮಾಟಮಾಡಿದ ಶಿವ ಈಗ ಹೊಳೆ ದಾಟಿ ಓಡಿಬಿಡುತ್ತಾನೇನು ? ....–ಹಾಗೆ ಸಂಶಯಗೊಂಡಳು ಮುಗ್ಧೆ. ಹೊಳೆ ದಾಟುವುದು ಈಗ ಸಾಧ್ಯವಲ್ಲವೆಂದು ಅರಿತಾಗಲೇ ಶಿವ ಹೇಳಿದ ಮಾತು ಅದು!....ಮೇಲು ಭಾಗದಲ್ಲಿ ಮಳೆ ಸುರಿಯುತ್ತಿರುವುದನ್ನು ಸೂಚಿಸಿ ಹೊಳೆಯಲ್ಲಿ ಹೊಸನೀರು ಹರಿದುಬರುತ್ತಿತ್ತು....

ಹೊಸನೀರು ಹೊಳೆ ತುಂಬಿ ಮ್ಯಾಲಿಂದ ಮುಗುಚ್ಯಾವು
ದೋಣಿಯನ್ಹಾಕೆ ಹೊಳೆಗೀಗ

ಎಂದು ಮತ್ತೆ ಹೇಳಿದ ಶಿವ, ಏನೆಂದರೂ ಈಕೆ ದೋಣಿ ಓಡಿಸಳು ಎಂಬ ಧೈರ್ಯ ಬಂದು.

ಹರಿಗೋಲನ್ಹಾಕವರು ಅಲ್ಲೆಲ್ಲಿಗೆದುರಯ್ಯ
ಗಂಗೆಗೂ ನಮಗೂ ಸಮಸಿಲ್ಲ
ದೋಣಿಯನ್ಹಾಕವರು ಅಲ್ಲೆಲ್ಲಿಗೆದುರಯ್ಯ
ಗಂಗೆಗೂ ನಮಗೂ ಸಮಸಿಲ್ಲ

—ತುಂಬಿ ಹರಿಯುವ ಹೊಳೆಗೆ ಎದುರಾಗಿ ದೋಣಿ ನಡೆಸುವುದು ಅಸಾಧ್ಯ ಎಂದಳು ಗಂಗೆ....ಯೋಗ್ಯವಾಯಿತು !....ಆ ದಿನ ಶಿವರಾಯ ಅಲ್ಲೆ ತಂಬು ನೆಟ್ಟು ತಂಗಿದ.

ಅನಂತರ ಎರಡುಮೂರು ದಿನಗಳಾದರೂ ಶಿವ ಕದಲಲಿಲ್ಲ. ತುಂಬಿದ ಹೊಳೆ ಇಳಿಯಲೇ ಇಲ್ಲವೇನೊ....ಆದರೆ ದಿನವೂ ದಿನದ ಎಲ್ಲ ವೇಳೆಯೂ ಶಿವ ಗಂಗೆಯರ ಹೊಳೆ ದಾಟುವ ಆಪ್ತಾಲೋಚನೆ ದಡದಮೇಲೆಯೆ ಸಾಗುತ್ತಿತ್ತು....ಮತ್ತೊಂದು ದಿನ, ಮಳೆ ತಿಳಿದು ಹೊಳೆ ಇಳಿದಿರಲು, ಶಿವ ಗಂಗೆಯನ್ನು ಕುರಿತು ಹೇಳಿದ:

ಮಳೆಯೆರಗಿ ಮುಗಿದವು ಹೊಳೆ ನೀರು ತಿಳಿದವು
ಇಂದು ಬಾರೆ ಗಂಗೆ ನಮಕೂಡ

'ನಮ್ಮ ಕೂಡ ಬಾ' ಎಂದರೆ? ಹೊಳೆ ದಾಟಿಸುವ ಸಲುವಾಗಿಯೆ ? ....ಅಥವಾ....?....ಎಂತಹ ಚತುರ ಈ ರಸಿಕ!....ಅದೇ ಚಾತುರ್ಯದಿಂದ ಉತ್ತರಿಸಿದಳು ಗಂಗೆ.

ಸಾಕಿ ಸಲಹಿದರುಂಟು ಅಪ್ಪಅಮ್ಮದಿರುಂಟು
ಅವರಿಗೊಂದು ಮಾತು ಕರೆದ್ಹೇಳಿ

....ತಮ್ಮ ತಮ್ಮಲ್ಲಿ ನಿರ್ಧರ ಮಾಡಿಕೊಂಡು, ಶಿವ ಗಂಗೆಯ ಅಪ್ಪ ಅಮ್ಮದಿರನ್ನು ಕೇಳಲು ಹೊರಟ.—ಹರಿಗೋಲು ದಾಟಿಸುವುದಕ್ಕಲ್ಲ, ಆ ಚೆಲುವೆಯ ಕೈಕೊಳ್ಳುವುದಕ್ಕೆ....

ಶಿವನೊಡನೆ ಗಂಗೆಯ ಮದುವೆ ನಿಶ್ಚಿತವಾಯಿತು. ಗಂಗೆಯ ಮನೆಯಲ್ಲಿ ಮದುವೆಗೆ ಅಣಿಯಾಗುತ್ತಿತ್ತು.

ಹಂದರ ಹರವಾಗಿ ನನೆಕಟ್ಟು ಜೋಲ್ಯಾವು
ಸಾಲುದ್ದ ಬಾಳೆ ತೂಗ್ಯಾವು

ಹೀಗೆ ಮದುವೆಯ ಸಿದ್ಧತೆಗಳು ನಡೆಯುತ್ತಿರಲು ಒಂದು ದಿನ,

ಅತ್ತಿ ಆಲದ ಮರ ಸುತ್ತಲು ಬೇವಿನ ಮರ
ನಟ್ಟನಡುವೊಂದು ಫಣಿಯಾಲ
ನಟ್ಟನಡುವೊಂದು ಫಣಿಯಾಲ ಮರನಡಿಗೆ
ಗಂಗೆಗು ಶಿವರಾಯಗು ಕಿವಿಮಾತು

ದಾಂಪತ್ಯಪೂರ್ವದ ಕೆಲವೇ ರಸಘಳಿಗೆಗಳು ಹೀಗೆ ಕಳೆಯುತ್ತಿರಲು,

ಗಂಗೆಗು ಶಿವರಾಯಗು ಕಿವಿಮಾತು ನಡೆವಾಗ
ಶಿವಪುರದಿಂದ ಗಿಳಿಬಂದು
ಶಿವಪುರದಿಂದ ಗಿಳಿ ಬಂದು ಶಿವನಡಿಗೆ
ಉತ್ತುತ್ತೆ ಹಣ್ಣ ಕೆಡಿಗ್ಯಾವು

ತನ್ನ ಗಂಡುದೋಳುಗಳಿಂದ ಗಂಗೆಯ ನಿಡುದೋಳುಗಳನ್ನು ಬಳಸಿಕೊಂಡು ಕಿವಿಗೆ ಜೇನು ಸುರಿಯುತ್ತಿದ್ದ ಶಿವ ತಲೆಯೆತ್ತಿ ನೋಡಿದ....ತನ್ನ ಊರಿನ ಗಿಣಿಗಳು. ಆಶ್ಚರ್ಯವಾಯಿತು. ದಿಗಿಲೂ ಆಯಿತು ತುಸು.

ಎತ್ತ ಬಂದೆ ಗಿಳಿರಾಮು ಏನು ತಂದೆ ಗಿಳಿರಾಮು

ಎಂದು ಶಿವ ಕೇಳಿದರೆ ಗಿಳಿಗಳು ಹೇಳುತ್ತವೆ:

ಉತ್ತುತ್ತೆ ಹಣ್ಣ ಕೊಳ್ಳಿರಯ್ಯ

ಅವು ಒಲವಿನಿಂದಿತ್ತ ಉತ್ತುತ್ತೆಯ ಹಣ್ಣನ್ನು ಸ್ವೀಕರಿಸಿ,

ಕಂಚಿಂದು ಕೈದಟ್ಟೆ ಮಿಂಚಿಂದು ಹೂದಟ್ಟೆ
ಪಂಚನುರುಗಿಳಿಯೆ ಬಂದಾವು

ಪಂಚಸುರುಗಿಳಿಯೆ ಬಂದಾವು ಕುಡಿಯಲು
ಸೇದಿಕೊಡು ಗಂಗೆ ಹಣಿನೀರ

ಎಂದು ಅವುಗಳಿಗೆ ಸತ್ಕಾರಮಾಡಿ ಅನಂತರ ಅವುಗಳನ್ನು ಮುಂಗೈಮೇಲೆ ಕೂರಿಸಿಕೊಂಡು ಪಿಸುಮಾತಿನಲ್ಲಿ ಬಿನ್ನವಿಸಿಕೊಳ್ಳುತ್ತಾನೆ ಶಿವ :

.......... ............................ಈ ಮಾತ
ಹೇಳದಿರಿ ಮನೆಯ ಗೌರಿಗೆ

ಆ ಗಿಳಿಗಳು ಎಲ್ಲವನ್ನೂ ನೋಡಿದವು; ಸತ್ಕಾರವನ್ನು ಸ್ವೀಕರಿಸಿದವು; ಶಿವ ಹೇಳಿದುದನ್ನು ಕೇಳಿದವು.

ಅಷ್ಟೊಂದು ಮಾತ ಕೇಳ್ಯಾವು ಆರಗಿಣಿ
ದಿಕ್ಕು ದಿಕ್ಕಿಗೆ ನಡೆದಾವು

ಗಿಣಿಗಳು ಊರು ಸೇರಿದವು. ತಾವು ಕಂಡ ಈ ಬಿಸಿ ಬಿಸಿ ಸುದ್ದಿಯನ್ನು ತಮ್ಮೊಳಗೇ ಬೈತಿಟ್ಟುಕೊಳ್ಳುವುದು ಹೇಗೆ ಸಾಧ್ಯ? ಹಾಗೆಂದು ಅವು ಬೇರೆ ಯಾರಿಗೂ ಹೇಳಲಿಲ್ಲ. ಗೌರಿಯಬಳಿ ಬಂದು ಕಿರುದನಿಯಲ್ಲಿ ಉಸುರಿದವು :

ಎತ್ತ ಹೋದೆ ಅಕ್ಕಯ್ಯ ಎತ್ತಬಂದೆ ಅಕ್ಕಯ್ಯ
ಮಾಲಿಂಗ ಮಾಹರನೆ ಕುಲಗೆಟ್ಟ
ಮಾಲಿಂಗ ಮಾಹರನೆ ಕುಲಗೆಟ್ಟಸಿನ್ನುಮೇಲೆ
ಬೋಪೇರ ಮಗಳ ತರುತಾನೆ

ಏನು ಅಪವಾರ್ತೆ ಸುರಿಯುತ್ತಿವೆ ಈ ಗಿಣಿಗಳು! ....ಗೌರಿ ನಿಬ್ಬೆರಗಾಗಿ ನಿಂತಿರಲು ಆ ಗಿಣಿಗಳು ತಾವು ಕಂಡು ಕೇಳಿದ ಒಂದೊಂದನ್ನೂ ಆದ್ಯಂತ ಹೇಳಿದವು. ಆದರೂ ಗೌರಿಗೆ ನಂಬಿಕೆ ಉಂಟಾಗಲಿಲ್ಲ. ತನ್ನ ಬಗೆಗೆ ಅಂತಹ ಅನುಪಮ ಪ್ರೇಮವನ್ನಿಟ್ಟಿದ್ದ ಶಿವ ಹೀಗೆ ಮಾಡಿಯಾನೆ? ಸುಳ್ಳು.

ಸುಳ್ಳಿದು ಗಿಳಿರಾಮ ಸುಳ್ಳಿದು ಚೆಲುರಾಮ
ಸುಳ್ಳು ಹೇಳದಿರಿ ಎಲೆ ರಾಮ

ಎಂದರೆ, ಅವೂ ಮುಖ ಕಿರಿದುಮಾಡಿ ಮತ್ತೆ ಹೇಳುತ್ತವೆ :

ರೆಕ್ಕೆ ಹುಟ್ಟೊ ಮುನ್ನ ಪಕ್ಕ ಬಲಿಯೋ ಮುನ್ನ
ಹಾಲು ಹಣ್ ಹಾಕಿ ಸಲಹಿದ
ಹಾಲು ಹಣ್ ಹಾಕಿ ಸಲಹಿದಕ್ಕನ ಕೂಡ
ಸುಳ್ಳು ನಾವೇನ ನುಡಿದೇವು

—ನಿಜ. ಅವು ಸುಳ್ಳು ಹೇಳುವ ಕಾರಣವಿಲ್ಲ. ವಿಧಿ ಮುನಿದಾಗ ಏನೂ ಆಗಬಹುದು....ಕೀಳು ಕುಲದ ಸವತಿಯೊಬ್ಬಳನ್ನು ತಂದು ಸಧ್ಯದಲ್ಲೆ ಮನೆ ದುಂಬಿಸುತ್ತಾನೆ ತನ್ನ ಪತಿ–ಇದಂತೂ ನಿಶ್ಚಯ.

ಅಷ್ಟೊಂದು ಮಾತ ಕೇಳ್ಯಾಳು ಸಿರಿ ಗೌರಿ
ಉಪ್ಪರಿಗೆ ಒಳಗೆ ನಡೆದಳು
ಉಪ್ಪರಿಗೆ ಒಳಗೆ ಹೋದಳು ಸಿರಿಗೌರಿ
ಹಿಡಿದಳಿಡಿಯಡಕೆ ಬಿಳಿಯೆಲೆ

ತಾನು ಕೇಳಿದ ಸುದ್ದಿ ಒಳಿತಿರಲಿ ಕೆಡುಕಿರಲಿ ಅದನ್ನು ನುಂಗಿಕೊಂಡು ಹೇಗೆ ಕುಳಿತಿರುವ್ರುದು, ಅಜೀರ್ಣವಾದವರಂತೆ?....ಆಚೀಚೆಯವರಿಗಾದರೂ ಈ ಸುದ್ದಿ ಹೇಳಿ ತನ್ನ ಮನಸ್ಸಿನ ಉಮ್ಮಳವನ್ನು ತುಸು ಕಡಿಮೆಮಾಡಿಕೊಳ್ಳುವೆನೆಂದು ಅಣಿಯಾಗಿ ಹೊರಟಳು ಗೌರಿ.

ಆಚೆ ಮನೆ ಅಕ್ಕ ಕೇಳೆ ಈಚೆಮನೆ ತಂಗಿ ಕೇಳೆ
ಮಾಲಿಂಗ ಮಾಹರನೆ ಕುಲಗೆಟ್ಟ
ಮಾಲಿಂಗ ಮಾಹರನೆ ಕುಲಗೆಟ್ಟನಿನ್ನುಮೇಲೆ
ಬೋವೇರ ಮಗಳ ತರುತಾನೆ

ಆಚೀಚೆಮನೆಯ ಅಕ್ಕತಂಗಿಯರು ಈ ಸುದ್ದಿಯನ್ನು ತುಂಬ ಕುತೂಹಲದಿಂದ ಕೇಳಿದರು. ಮತ್ತೆ ಮತ್ತೆ ಪ್ರಶ್ನಿಸಿ ವಿವರವನ್ನೆಲ್ಲ ತಿಳಿದುಕೊಂಡರು. ಶಿವನ ಕುರಿತು ಕೋಪ ಪ್ರಕಟಿಸಿದರು....

ಅಷ್ಟೊಂದು ಮಾತ ಹೇಳ್ಯಾಳು ಸಿರಿ ಗೌರಿ
ಬಂದಾಳು ತನ್ನ ಅರಮನೆಗೆ

....ಮನೆಗೆ ಬಂದವಳು ಅತ್ತ ಇತ್ತ ತಿರುಗಿದಳು; ಸುಮ್ಮನೆ ಕುಳಿತು ಕಣ್ಣೀರು ಸುರಿಸಿದಳು ; ತನ್ನನ್ನೆ ನಿಂದಿಸಿಕೊಂಡಳು........ಮಾಂಸದೊಳಕ್ಕೆ ಅಂಬು ನಾಟಿದ ಪಶುವಿನಂತೆ ಅಸಹ್ಯವಾಗಿ ದಿನವೆಲ್ಲ ತೊಳಲಿದಳು........

........ನಾಲ್ಕಾರು ದಿನ ಕಳೆಯುವುದರಲ್ಲಿ ಗೌರಿ ಬದಲಾಗಿದ್ದಳು. ಕೇಳಿದೊಡನೆಯೇ ತನ್ನ ಸರ್ವಸ್ವವನ್ನೂ ಕೆರಳಿಸಿ ನರಳಿಸಿತ್ತು ಆ ಸುದ್ದಿ. ಆ ಹೊತ್ತಿನ ಬಿಸಿ ಈಗ ಇಳಿದಿತ್ತು. ಚಿತ್ತ ತಾನಾಗಿಯೇ ಪ್ರಸನ್ನಗೊಳ್ಳುತ್ತಿತ್ತು........ಗಂಡ ಸವತಿಯನ್ನು ತರುವುದಾದರೆ ತರಲಿ. ಕೇವಲ ಅಷ್ಟ

ಕ್ಕಾಗಿ ತಾನೇಕೆ ಕೊರಗಬೇಕು? ಆತನ ಸುಖಕ್ಕೆ ಅಗತ್ಯವಾದುದು ಪರ್ಯಾಯವಾಗಿ ತನಗೂ ಸುಖವನ್ನೆ ಕೊಡುವುದಿಲ್ಲವೆ? ಸವತಿ ಬಂದಳೆಂಬ ಮತ್ಸರ ಏಕೆ? ತಂಗಿ ಬಂದಳೆಂದು ಹರ್ಷಗೊಂಡರಾಯಿತು. ಒಲವು ಕೊಟ್ಟು ಒಲವು ಕೊಂಡು ಆಕೆಯ ಕೂಡ ಸವಿಯಾಗಿ ಬಾಳಿದರಾಯಿತು......ಬರಲಿರುವ ತನ್ನ ಹೊಸ ತಂಗಿಯನ್ನು ಮನೆದುಂಬಿಸಿಕೊಳ್ಳುವ ಸಲುವಾಗಿ ಹರ್ಷಚಿತ್ತದಿಂದ ಮನೆಯನ್ನು ಸಿಂಗರಗೊಳಿಸತೊಡಗಿದಳು ಗೌರಿ........

ಅತ್ತ, ಗಂಗೆಯನ್ನು ಮದುವೆಯಾದ ಶಿವ ಆಕೆಯನ್ನು ಜೊತೆಗೂಡಿಸಿಕೊಂಡು ಮನೆಯ ಕಡೆಗೆ ಹೊರಟ. ತನಗೆ ಹೊಸ ಸಿರಿಯನ್ನು ಕಾಣಿಕೆಗೊಟ್ಟ ಗಂಗಾತೀರವನ್ನುಳಿದು, ಮುಂದಿನ ಹಾದಿಯನ್ನು ಅನಾಯಾಸವಾಗಿ ಕ್ರಮಿಸುತ್ತ ಬರುವಾಗ ತನ್ನ ಚೆಲುವಿನ ಮಡದಿಗೆ ಆಕೆಯ ಪೂರ್ವ ಕಥೆಯೆಲ್ಲವನ್ನೂ ಹೇಳಿದ. ಸುರಕನ್ಯೆಯಾಗಿದ್ದ ಆಕೆ ನದಿಯ ರೂಪದಲ್ಲಿ ಮರ್ತ್ಯಕ್ಕೆ ಅವತರಿಸಿದುದು, ಮರ್ತ್ಯದಲ್ಲಿ ನದಿಯಾಗಿ ಹರಿಯುತ್ತಿದ್ದವಳು ಮನುಷ್ಯಜನ್ಮದ ಆಸೆಯಾಗಿ ಅಲ್ಲಿಯೇ ದೋಣಿ ನಡೆಸುವವರ ಮಗಳಾಗಿ ಹುಟ್ಟಿದುದು–ಎಲ್ಲವನ್ನೂ ರಮ್ಯವಾಗಿ ಹೇಳಿ ಆಕೆಯ ಚಿತ್ತವನ್ನು ಜಾಜ್ವಲ್ಯಗೊಳಿಸಿದ........

ಅನೇಕ ದಿನಗಳ ಪ್ರಯಾಣ ಮುಗಿದು ಉದ್ದದ ಹಾದಿ ತೀರಿಬರಲು, ಎದುರಿನಲ್ಲೆ ವಿರಾಜಿಸುವ ಬೆಳ್ಳಿಯ ಬೆಟ್ಟ ಕಾಣಿಸಿತು. ಬೆಟ್ಟದ ಮುಡಿಯ ಶಿವಪುರ ರಮ್ಯವಾಗಿ ಕಂಗೊಳಿಸಿತು........ಇನ್ನು ತನ್ನ ಮನೆ ಬಂದಿತು. ಅರಿಯದ ಗೌರಿಯೆದುರು ಈ ಮಡದಿಯನ್ನು ಕೊಂಡೊಯ್ದು ನಿಲ್ಲಿಸಿದರೆ ಆಗಬಾರದುದು ಆಗಿಬಿಟ್ಟೀತು–ಎಂದು ಎಚ್ಚರಗೊಂಡ ಶಿವ. ತನ್ನ ಮಾಯೆಯಿಂದ ಗಂಗೆಯನ್ನು ಮುಡಿಯಲ್ಲಿ ಹುದುಗಿಸಿಕೊಂಡ........

ಮನೆಯೆದುರು ಬಂದು ನಿಂತ ಶಿವ,

ಉಪ್ಪರಿಗೆ ಒಳಗೆ ಕುಂತಿರುವ ಬೆನಮಯ್ಯ
ಬಂದು ಬಾಗಿಲ ತೆಗೆಯಯ್ಯ

ಎಂದು ಮಗನನ್ನು ಕೂಗಿದ........ಊರೆಲ್ಲ ಗುಡುಗಾಡಿದ ಸುದ್ದಿ ಬಾಲಕ ಬೆನಮಯ್ಯನ ಕಿವಿಗೂ ಬಿದ್ದಿತ್ತು. ತನ್ನ ತಾಯಿಯಿರುವಾಗ ಬೇರೊಂದು

ಹೆಣ್ಣನ್ನು ಮನೆಯೊಳಕ್ಕೆ ತರುವ ತಂದೆಯ ಬಗೆಗೆ ಆತನಿಗೂ ಕೋಪವೆನಿಸಿದ್ದಿತು. ಅದೇ ಸಿಟ್ಟಿನ ಭರದಲ್ಲಿ ಕಿರುಚಿದ ಬೆನಮ:

ಬಾಗಿಲು ತೆಗೆಯಲು ನಮ್ಮಯ್ಯ ಹೌದೇನೋ
ನಮ್ಮವ್ವನ ವ್ಯಾಲೆ ಸವತಿಯ
ನಮ್ಮವ್ವನ ವ್ಯಾಲೆ ಸವತಿಯ ತರುವಂಥ
ನಮ್ಮಯ್ಯರು ನೀವು ಹೌದೇನೋ

—ಹಾಗಾದರೆ, ಈ ಮುದ್ದು ಪೋರನಿಗೂ ಸುದ್ದಿ ತಿಳಿದುಬಿಟ್ಟಿದೆ........ ಗೌರಿಗೆ ತಿಳಿಯದಿದ್ದೀತೆ?....–ದಿಗಿಲಿನ ಕೂಡ, ಮಗನ ಅಧಿಕಪ್ರಸಂಗದಿಂದ ಶಿವನಿಗೆ ರೇಗಿತು. ಸಿಟ್ಟಿನಲ್ಲಿ ಹೊರಗಿನಿಂದಲೇ ಕೂಗಿದ ಶಿವ:

ಬಾಯಿ ಮುಚ್ಚೋ ಬೆನಮ ಒಳಗೆ ಬಂದೇನಂದ್ರೆ
ದೊಳ್ಳೊಟ್ಟಿ ಮೆಟ್ಟಿ ಒಡೆದೇನು

—ತಂದೆ ಮಕ್ಕಳ ಈ ಬಿಸಿ ಮಾತುಗಳನ್ನು ಒಳಗಿನಿಂದ ಕೇಳಿದ ಗೌರಿ ಧಾವಿಸಿ ಬಂದಳು. ತಾನು ಮೆಚ್ಚಿ ಮದುವೆಯಾದ ಹೆಣ್ಣನ್ನು ಮೊದಲ ಬಾರಿಗೆ ಕರೆತರುತ್ತಿದ್ದಾನೆ ತನ್ನ ಪತಿ. ಆತನನ್ನು ಗೌರವದಿಂದ ಸ್ವಾಗತಿಸಿ, ಹರ್ಷದಿಂದ ಆಕೆಯನ್ನು ಮನೆದುಂಬಿಸಿಕೊಳ್ಳಬೇಕಿತ್ತು. ಬಡಲು ಮೊದಲಿಗೇ ಬೆನಮನ ಈ ತುಂಟ ಮಾತು. ತನ್ನ ಪತಿ ಎಷ್ಟು ಬೇಸರಗೊಂಡನೋ........

ಅಷ್ಟೊಂದು ಮಾತ ಕೇಳ್ಯಾಳು ಸಿರಿ ಗೌರಿ
ಬಂದು ಬಾಗಿಲವ ತೆರೆದಳು

ಬಾಗಿಲು ತೆರೆದು, ಹಸನ್ಮುಖದ ಕಣ್ಣಿನಿಂದಲೇ ಪತಿಯನ್ನು ಸ್ವಾಗತಿಸಿದಳು........ಒಬ್ಬನೇ ಬಂದಿದ್ದಾನೆ. ತನ್ನ ತಂಗಿ?........ಅತ್ತ ಇತ್ತ ಎಲ್ಲೂ ಕಾಣಿಸಳು........ ಶಿವನ ಮಾಯೆ ಹೊಸದಲ್ಲ ಆಕೆಗೆ; ಚಣದಲ್ಲಿ ಅರಿತಳು.

ಎರಡು ಚೆಂಬಿನಲಿ ಹಣಿಯುದಕ ತಂದಳು
ಪತಿಯಡಿಗೆ ಬಾಗಿ ನಿಂತಳು

ಮಡದಿ ಮುನಿಸುಗೊಂಡು ತನ್ನನ್ನು ತಿರಸ್ಕರಿಸುವಳೊ, ಉಪೇಕ್ಷಿಸುವಳೊ ಎಂದು ಸಂಶಯಿಸುತ್ತಿದ್ದ ಶಿವನಿಗೆ ಇಂಥ ಹಾರ್ದಿಕ ಸ್ವಾಗತ ಅಚ್ಚರಿ

ಯುಂಟುಮಾಡಿತು. ಆಕೆಯ ಗುಣವನ್ನು ಮೆಚ್ಚಿ ತನ್ನೊಳಗೇ ತಲೆದೂಗಿದ ........ಅನಂತರ, ಎದುರಿಗೆ ಎರಡು ತಂಬಿಗೆಗಳಲ್ಲಿದ್ದ ಹಣಿಯುದಕವನ್ನು ಸೂಚಿಸಿ ಹಾಸ್ಯದಿಂದ ಕೇಳಿದ:

ಅದು ಏನೆ ಸಿರಿ ಗೌರಿ ಎರಡು ಚೆಂಬಿಲಿ ನೀರು
ನಿನಗಿಬ್ಬರೇನೆ ಪುರುಷರು

ಆಕೆ ಹಸನ್ಮುಖದಿಂದಲೇ,

ನನಗಿಬ್ಬರೆಂಬುದ ಹರ ಬಲ್ಲ ಹರಿ ಬಲ್ಲ
ಶಿವನ ಕೆಂಜೆಡೆಯ ಮುಕುಟದಲಿ
ಶಿವನ ಕೆಂಜೆಡೆಯ ಮುಕುಟದಲಿ ಇರುವಂಥ
ಸುರನಾರಿಗೊಂದು ನಿಮಗೊಂದು

ಎಂದು ಚಾತುರ್ಯದಿಂದ ಉತ್ತರ ಕೊಟ್ಟು ಶಿವನನ್ನು ಸಂಪ್ರೀತಗೊಳಿಸಿದಳು.

ಸಮುದ್ರರಾಜನನ್ನು ಕೂಡಿದ ಗಂಗೆಯಮುನೆಯರಂತೆ ಶಿವನನ್ನು ಕೂಡಿದ ಅಕ್ಕತಂಗಿಯರಿಬ್ಬರು ಹರ್ಷ ಚಿತ್ತರಾಗಿ ಮನೆದುಂಬಿ ನಿಂತರು.

ಇಂದೀಗ್ಗುರಹರ ಇಂದೀಗೆ ಶಿವಶಿವ
ಇಂದೀಗೀಶಂದೆ ಪದ ಮುಂದೆ

---

## ೫. ನೀನ್ಹೋಗಿ ಸಲಹೋ ಮರುತ್ಯಾವ

ಬಸವಗೆ ಬಸವೆನ್ನಿರೋ
ಬಸವನ ಪಾದಕೆ ಶರಣೆನ್ನಿರೋ

ಭಗವಂತ ಬೀಜವನ್ನು ಕೊಟ್ಟಿರಲು, ಭೂಮಿದೇವಿ ಎದೆಬಿಚ್ಚಿ ನಿಂತಿರಲು, ದೇವೇಂದ್ರ ಮಳೆಗರೆಯುತ್ತಿರಲು, ತನ್ನ ನೆತ್ತರನ್ನೆ ಸುರಿದು ಭೂಮಿತಾಯಿಯನ್ನು ತೃಪ್ತಳಾಗಿಸಿ ಆಕೆಯ ಹರಿದ್ರೋಮಾಂಚನದಿಂದ ಜಗತ್ತೆ ಆನಂದಮಯವಾಗುವಂತೆ ಮಾಡುವ ಬಸವನ ಪಾದಗಳಿಗೆ ಇದೊ, ಸಾವಿರ ಶರಣು !

ದೇವರು ಬಸವಯ್ಯನ ವಚನ ಹೇಳುತೇವೆ
ತಿದ್ದಬೇಕು ಬಲ್ಲ ಹಿರಿಯೋರು
ಕಲಿತು ಹೇಳುವ ಹಾಡು ಪದ ಶುದ್ಧ ದನಿ ಶುದ್ಧ
ಸಕ್ಕರೆ ಜೇನು ಬೆರೆತ್ಹಂಗೆ
ಕಲಿಯುದೆ ಹೇಳುವ ನಮ್ಮ ಹೆಡ್ಡ ಜನರ ಹಾಡು
ಕಾನಾಗಿನ ಮಳೆಯು ಸುರಿದ್ಹಂಗೆ
ಬೆನಮಯ್ನ ದಯವಿರಲಿ ಸರಸತಿ ಕರುಣಿಸಿರಲಿ
ಕುಂತಂತ ಸಭೆಯೆ ಮನಗೊಡಲಿ

ಸಭ್ಯರ ಸಭೆ ಸವಿಗಾರರ ಕೂಟ ಈ ಹಾಡನ್ನು ಲಾಲಿಸಲಿ, ಅವರಲ್ಲಿ ದಯೆ ಉದಯಿಸಲಿ, ಭಕ್ತಿ ಮೂಡಲಿ, ಅವರು ಸಂತೃಪ್ತರಾಗಲಿ.

ಬಸವನ ಕುಲ ಹುಟ್ಟಿ ಬಸವನ ಕುಲವಳಿದು
ಮತ್ತೆ ಬಸವಯ್ಯ ಮರುತ್ಯಕೆ
ಮತ್ತೆ ಬಸವಯ್ಯ ಮರುತ್ಯಕೆ ಇಳಿದಂಥ
ದೇವರು ಬಸವಯ್ಯನ ವಚನವ
ದೇವರು ಬಸವಯ್ಯನ ವಚನ ಹೇಳುತೇವೆ
ಲಾಲಿಸಬೇಕೀಗ ಬಲ್ಲೋರು

....ಸುಂದರವಾದ ಹದಿನಾಲ್ಕು ಲೋಕಗಳನ್ನು ಸೃಷ್ಟಿಸಿದ ಶಿವ ಭೂಲೋಕವನ್ನು ಸೃಜಿಸಿದ. ಭೂಮಿಯಮೇಲೆ ಅನೇಕ ಜೀವಜಂತುಗಳನ್ನು ನಿರ್ಮಾಣಮಾಡಿದ. ಅವುಗಳ ಸಲುವಾಗಿ ಅನೇಕ ಸಸ್ಯಜೀವಿಗಳನ್ನು ನಿರ್ಮಿಸಿದ. ಇವೆಲ್ಲವುಗಳಲ್ಲೂ ಒಂದಕ್ಕೊಂದಕ್ಕೆ ಪ್ರೇಮ ವೈವಿಧ್ಯಗಳು ಬೆಳೆಯಲೆಂದು ನಿಯತಿ ಮಾಡಿದ.

ಮನುಷ್ಯ ಬುದ್ಧಿವಂತನಾಗಿ ಬೇಸಾಯವನ್ನು ಕಂಡುಹಿಡಿದ. ಅದಕ್ಕೆ ಮೆಚ್ಚಿದ ಶಿವ ಈತನ ಆರಂಭಕ್ಕೆ ನೆರವಾಗುವಂತೆ ತನ್ನ ವಾಹನವಾದ ನಂದಿಯ ಕುಲವನ್ನು ಮರ್ತ್ಯಲೋಕಕ್ಕೆ ಕಳುಹಿಸಿದ....ಆರಂಭ ಸುಲಭವಾಯಿತು. ಭೂಮಿ ತಾಯಿ ಹಸಿರುಡುಗೆಯುಟ್ಟು ರಾರಾಜಿಸಿದಳು. ಆಕೆಯ ಕೃಪೆಯಿಂದ ಇಲ್ಲಿ ಬಸವನ ಕುಲ ಬೆಳೆಯಿತು....ಹೀಗೆಯೇ ಕೆಲವು ಯುಗ ಕಳೆದವು. ಕಾಲ ಕಳೆದಂತೆ ಮರ್ತ್ಯದ ಜನ ಋಣವನ್ನು ಮರೆತರು. ಮಾನವಕುಲದ ಪ್ರಕೃತಿಯ ಆರಾಧನೆಯಲ್ಲಿ ಪೂಜಾರಿಯಂತಿದ್ದ ಬಸವನನ್ನು ಕಡೆಗಂಡರು. ಭೂಮಿಯಲ್ಲಿ ಬಿತ್ತಿ ಪಡೆದ ಬೆಳೆಯೆಲ್ಲ ಕೇವಲ ತಮ್ಮ ಸಾಧನೆಯ ಫಲ ಎಂದು ಭ್ರಾಂತಿಗೊಂಡರು, ಮತ್ತರಾದರು. ನೆಲವಿತ್ತ ಧಾನ್ಯವೆಲ್ಲವನ್ನೂ ತಮಗಾಗಿ ಬಳಸಿಕೊಳ್ಳುತ್ತ, ತಮಗೆ ಬಗೆಬಗೆಯಿಂದ ನೆರವಾಗುತ್ತಿದ್ದ ಬಸವಯ್ಯನ ಕಡವನ್ನು ಮರೆತು ಆತನಿಗೆ ಅರೆ ಹೊಟ್ಟೆ ಮಾಡಿದರು. ಹೇಗಾದರೂ ಮರ್ತ್ಯದ ಮಾನವರ ಅಹಂಕಾರ ಮುರಿಯಬೇಕೆಂದು ತೋರಿತು ಈಶ್ವರನಿಗೆ....ಶಿವನ ಇಚ್ಛೆಯಂತೆ, ಕೆಲವು ಕಾಲದಲ್ಲಿ ಜಗತ್ತಿನೊಳಗೆ ವೃದ್ಧಿಯಾಗಿ ಬಂದಿದ್ದ ನಂದಿಯ ಸಂತಾನ ಕ್ಷಯಿಸತೊಡಗಿತು. ಬಸವನ ಕುಲದ ಹೆಸರೇ ಪ್ರಪಂಚದಲ್ಲಿ ಅಡಗಿ ಹೋಗುವಂತೆ ತೋರಿತು....ಕೊನೆಯಲ್ಲಿ ಎರಡು ಎತ್ತುಗಳು ಮಾತ್ರ ಉಳಿದುಕೊಂಡವು. ಆವುಗಳಲ್ಲೂ ಸ್ವಯೂಥಕಲಹ ಉತ್ಪನ್ನವಾಯಿತು.

ಎತ್ತು ಎತ್ತು ಕಾದಿ ಗುತ್ತಿಹೊಳೆಯ ಬಿದ್ದು  
ಕಲ್ಲು ಬಸವಯ್ಯ ಒಡಮೂಡಿ  
ಕಲ್ಲು ಬಸವಯ್ಯ ಒಡಮೂಡಿ ಭೂಮ್ಯಾಗೆ  
ಹೊಳೆದೇವರಾಗಿ ನೆಲೆಸಿಂತ

....ಇದ್ದ ಎರಡು ಹೋರಿಗಳೂ ಹೊಳೆಯ ದಂಡೆಯಲ್ಲಿ ಕಾದತೊಡಗಿದವು. ಕೆಳಗೆ ಪ್ರಪಾತದಲ್ಲಿ ಹರಿಯುವ ಹೊಳೆ. ಎತ್ತರವಾದ ದಂಡೆಯ ದರೆಯಮೇಲೆ ನಿಂತು ಕೊಂಬಿಗೆ ಕೊಂಬು ಕೊಟ್ಟು ಹಣೆಗೆ ಹಣೆಯಿಟ್ಟು ಹೋರಾಡುವಾಗ, ಒಮ್ಮೆ ಆಯತಪ್ಪಿ ಎರಡೂ ಕೆಳಗುದುರಿ ನೀರಪಾಲಾದವು. ಬಸವಸಂತಾನ ಭೂಮಿಯಲ್ಲಿ ಕೊನೆಗೊಂಡಿತು. ಅವಶೇಷವಾಗಿ ಹೊಳೆಯ ಸಂಗಮದೆಡೆ ಕರಿಕಲ್ಲಿನಲ್ಲಿ ಬಸವನ ಮೂರ್ತಿ ಒಡೆದು ಮೂಡಿತು. ಸತ್ತ ಹೋರಿಗಳು ಶಿವನ ಪಾದ ಸೇರಿದವು....

....ಇಲ್ಲಿ ಮರ್ತ್ಯದಲ್ಲಿ, ಮಾನವನೊಬ್ಬ,

ಪಕ್ಕಲು ಕಡಿದನು ಹಾರಳ್ಳಿ ಮಾಡ್ಯಾನು
ಹೋರಿಲ್ಲವೆಂದು ಮರುಗ್ಯಾನು

—ಆರಂಭಕ್ಕೆಂದು ಕಾಡು ಕಡಿದು ನೆಲವನ್ನು ನಯಮಾಡಿ ಹೊಸ ಹಳ್ಳಿಯನ್ನ ನಿರ್ಮಿಸಿ ಎಲ್ಲವನ್ನೂ ಅಣಿಪಡಿಸಿಕೊಂಡ ಮಾನವ ಉಳಲು ಹೋರಿ ಇಲ್ಲದೆ ಮರುಗಿದ. ಶಿವ ಕೃಪೆಮಾಡಿದನೆಂದರೆ, ಬಸವನ ಕುಲ ನೆಲಕ್ಕಿಳಿದಿತೆಂದರೆ ಮಾತ್ರ ತನ್ನ ಶ್ರಮ ಸಫಲವಾದೀತು. ಇಲ್ಲದಿದ್ದರೆ ಎಲ್ಲ ವ್ಯರ್ಥ. ಆರಂಭ ಕೇವಲ ಕನಸು. ಆರಂಭ ಇಲ್ಲವೆಂದರೆ ಕ್ಷಾಮದಾಮರಗಳು ಗುಳೆಯೆತ್ತಿ ಬಂದುಬಿಡುತ್ತವೆ. ಅಷ್ಟಾದ ಮೇಲೆ ಮಾನವ ಕುಲ ನಿರ್ವಂಶವಾಗಲು ಎಷ್ಟು ಹೊತ್ತು ಬೇಕು? ....ಕೃಷಿಕ ಶಿವನನ್ನು ಕುರಿತು ಮೊರೆಯಿಟ್ಟು ಹಲುಬಿದ. ಈ ಆರ್ತನ ಪ್ರಾರ್ಥನೆ ಶಿವನನ್ನು ಚಲಿಸಿತು. ತಾನು ಸೃಜಿಸಿದ ಮಾನವಪುತ್ರರ ಬಗೆಗೆ ಕನಿಕರ ಮೂಡಿತು........ಬಸವನನ್ನು ಬಳಿಗೆ ಕರೆದು ಹೇಳಿದ ಶಿವ:

ಹೋರಿಲ್ಲವೆಂದು ಮರುಗ್ಯಾನು ಬಸವಯ್ಯ
ನೀನ್ಹೋಗಿ ಸಲಹೋ ಮರುತ್ಯಾವ

ತಲೆಯಾಡಿಸಿದ ಬಸವ. ಶಿವ ಆತನಿಗೆ ಜಗತ್ತಿನ ಸ್ಥಿತಿಯನೆಲ್ಲ ವರ್ಣಿಸಿದ. ನಿನ್ನ ನೆರವಿಲ್ಲದೆ ಮನುಷ್ಯಕುಲ ನಿರ್ನಾಮವಾಗಿ ಹೋಗುತ್ತದೆ ಎಂದು ಹೇಳಿದ.

ಗದ್ದೆಯ ಕಡಿದಾನು ಗಣ್ಣವ ಮಾಡ್ಯಾನು
ಹೋರಿಲ್ಲವೆಂದು ಮರುಗ್ಯಾನು

ಹೋರಿಲ್ಲವೆಂದು ಮರುಗ್ಯಾನೊ ಬಸವಯ್ಯ
ನೀನ್ಹೊಗಿ ಸಲಹೊ ಮರುತ್ಯಾವ

ಎಷ್ಟು ಪರಿಯಾಗಿ ಹೇಳಿದರೂ ಬಸವಯ್ಯ ಪುನಃ ಭೂಮಿಗೆ ಹೋಗುವುದಕ್ಕೆ ಒಪ್ಪುವುದಿಲ್ಲ. ತಾನು ಹಿಂದೆ ಮರ್ತ್ಯಲೋಕದಲ್ಲಿ ಅನುಭವಿಸಿದ ಕಣ್ಣೀರಿನ ಕಥೆ, ನಡುರಾತ್ರಿ ಬಂದ ಪ್ರೇತದ ನೆನಪಿನಂತೆ, ಆತನನ್ನು ಕಾಡಿಸುತ್ತಿತ್ತು. ಶಿವನಾದರೂ ಅರಿಯದ ಕಥೆಯೆ ಅದು ?...ಅಲ್ಲಿ ತಾನು ಪಟ್ಟ ಪಾಡನ್ನು ಎಷ್ಟು ಬಾರಿ ಶಿವನ ಪಾದದಡಿಯಲ್ಲಿ ನಿವೇದಿಸಿಕೊಂಡು ಕಣ್ಣೀರು ಕರೆಯಲಿಲ್ಲ? ಎಷ್ಟು ಬಾರಿ ಆ ಕಥೆಗಳನ್ನು ಕೇಳಿ ತಾಯಿ ಪಾರ್ವತಿ ಮುಖ ಮುಚ್ಚಿ ಅತ್ತುದಿಲ್ಲ? ಎಷ್ಟು ಬಾರಿ ಶಿವ ತನ್ನ ಕಂಬನಿಯೊರಸಿ ಸಂತವಿಸಿದುದಿಲ್ಲ?....ಮತ್ತೆ ಏಕೆ ತನ್ನ ದಣಿ ತನ್ನನ್ನು ಹೀಗೆ ನರಕದ ಮಡಿಲಿಗೆ ನೂಕಲೊಪ್ಪುತ್ತಿದ್ದಾನೆ?....ಮತ್ತೆ, ಬಸವಯ್ಯ ಭೂಮಿಯಮೇಲೆ ತಾನು ಅನುಭವಿಸಿದ ಸಂಕಷ್ಟಗಳನ್ನೆಲ್ಲ ಒಂದೊಂದಾಗಿ ಹೇಳತೊಡಗಿದ:

ಭತ್ತವ ಬಿತ್ತಿದರೆ ಭತ್ತನವರುಂಡಾರು
ಭತ್ತದ ಹುಲ್ಲ ನಮಗ್ಹಾಕಿ

ವರ್ಷವೆಲ್ಲ ತಾವು ದುಡಿದು ಬೆಳೆದುದನ್ನು ಅವರು ಕೊಂಡು, ತಮಗೆ ಮಾತ್ರ ಹಿಡಿ ಹುಲ್ಲು ಎಸೆಯುವ ಕೃತಘ್ನ ಜನ ಮರ್ತ್ಯರು–ಎಂದು ಬಸವ ಹೇಳಿದರೆ ' ಮರ್ತ್ಯದಲ್ಲಿ ಜನ ಭತ್ತದ ಬೀಜ ಬಿತ್ತುವಾಗ ನೀವು ತ್ಯಾಗದ ಬೀಜ ಬಿತ್ತಬೇಕು ಬಸವಣ್ಣ ' ಎಂದು ಶಿವ ಹೇಳುತ್ತಾನೆ.

ಭತ್ತದ ಹುಲ್ಲ ನಿಮಗ್ಹಾಕಿ ಬೆಳೆಸಿದರೂ
ನೀನ್ಹೋಗಿ ಸಲಹೋ ಮರುತ್ಯಾವ

—ಹೋದ ಹೊಸತರಲ್ಲಿ ನಾಲ್ಕುದಿನ ಭತ್ತದ ಹುಲ್ಲು ಹಾಕಿಯಾರು. ಅನಂತರ ಅದನ್ನೂ ಅವರು ತೆಗೆದಿಟ್ಟುಕೊಂಡು ತಮಗೆ ಕಾಡಿನ ಹಾದಿ ತೋರಿಸಿಯಾರು. ಕಾಡಿನಲ್ಲಾದರೂ ಶಿವ ಬೆಳೆಸಿದ ಹುಲ್ಲು ತಿಂದು ಹೊಟ್ಟೆ ತುಂಬಿಸಿಕೊಂಡೇವೆಂದರೆ ಅದಕ್ಕೂ ಬಿಡಲಾರರು. ಕಾಡು ಕಡಿದು ಭೂಮಿ ಮಾಡುತ್ತಾರೆ. ನಮ್ಮನ್ನೇ ಶ್ರಮಕ್ಕೆ ಹಚ್ಚಿ ಅಲ್ಲಿಯೂ ಬೆಳೆ ಬೆಳೆಯುತ್ತಾರೆ.

ಹತ್ತು ಖಂಡುಗ ಹೊಲಕೆ ಭತ್ತ ಬಿತ್ತುತಾನೆ
ನಿಂತು ಮೇಯಲಿಕು ನೆಲವಿಲ್ಲ
ನಿಂತು ಮೇಯಲಿಕು ನೆಲವಿಲ್ಲ ಶಿವರಾಯ
ನಾನೊಲ್ಲೆನಯ್ಯ ಮರುತ್ಯಾವ

ತನ್ನ ಪಾಡು ತೋಡಿಕೊಂಡರೂ ಶಿವ ಮರುಮಾತಾಡದೆ ಸುಮ್ಮನೆ ನಿಂತು ಬಿಟ್ಟುದನ್ನು ಕಂಡು ಬಸವ ತನ್ನ ಬುವಿಯ ಬವಣೆಯನ್ನು ಮತ್ತೂ ಹೇಳುತ್ತಾನೆ:

ಹತ್ತೆಂಟರೊಳಗೊಂದು ಚಚ್ಚಾಳಿ ಹುಟ್ಟಿದರೆ
ಇಟ್ಟಲು ಕೂಡಿ ಹಾಲ ಕರೆವರೊ
ಇಟ್ಟಲು ಕೂಡಿ ಹಾಲ ಕರೆವರೊ ಶಿವರಾಯ
ನಾನೊಲ್ಲೆನಯ್ಯ ಮರುತ್ಯಾವ

ಹತ್ತು ಇರುವಾಗ ಒಂದು ಹಸು ಹಾಲು ಕೊಡದೆ ಚಾಳಿ ಮಾಡೀತು. ಆಗ ಅದನ್ನು ಇಟ್ಟಲಿನೊಳಕ್ಕೆ ಕೂಡಿ ಹಿಂಸಿಸಿ ಹಾಲು ಕರೆಯುತ್ತಾರೆ. ನನ್ನ ಕುಲಕ್ಕೆ ಉಂಟಾದ ಸಂಕಟವನ್ನು ಹೇಗೆ ಸುಮ್ಮನೆ ನೋಡುತ್ತಿರಲಿ?........ ನಮಗೆ ಇಷ್ಟು ಹಿಂಸೆ ಕೊಟ್ಟರೂ ಒಂದು ಒಳ್ಳೆಯ ಮಾತು ಕೇಳುವಂತಿಲ್ಲ. ಸದಾ ಹಿಂಸೆ, ಸದಾ ಕ್ರೂರವಾಕ್ಯ.

ಯಾರೊಬ್ಬರು ಮನೆಗೆ ಮಜ್ಜಿಗೆಗೆ ಬಂದರೆ
ಎದ್ಹೋಗಿ ನೀರ ಬೆರಸ್ಯಾರು
ಎದ್ಹೋಗಿ ನೀರ ಬೆರಿಸ್ಯಾರೊ ಶಿವರಾಯ
ಕರುವುಂಡವೆಂದು ನುಡಿದಾರೊ

ಕರುವಿಗೆ ತೊಟ್ಟು ಹಾಲಿಲ್ಲದಂತೆ ಹೀಚುವುದು ಮಾತ್ರವಲ್ಲ, ಮತ್ತೆ ಊರಿನವರ ಎದುರಿನಲ್ಲಿ ಕರುವಿಗೆ ಶಾಪ, ಕರುವಿನ ತಾಯಿಗೆ ಶಾಪ........ಶಿವ ಅರಿಯದುದಲ್ಲ ಈ ಕ್ರೌರ್ಯ. ಮನುಷ್ಯಹೃದಯ ದಿನದಿನಕ್ಕೆ ಸ್ವಾರ್ಥದ ವಿಷಕುಂಭವಾಗುತ್ತಿದೆ. ಆದರೆ ತನ್ನ ಮಕ್ಕಳೇ ಆದ ಅವರನ್ನು ಹೇಗಾದರೂ ಉದ್ಧರಿಸಬೇಕಲ್ಲವೆ? ಅವರ ಸ್ವಾರ್ಥವನ್ನು ಪ್ರತೀಕಾರವಿಲ್ಲದೆ ಸಹಿಸಿ, ಅದನ್ನು ಹೀಯಾಳಿಸಬೇಕು. ಸ್ವಾರ್ಥವನ್ನು ಚುಚ್ಚಿ ಚುಚ್ಚಿ ಅದರೊಳಗಿನ ಪೊಳ್ಳು ತಿಳಿಯುವಂತೆ ಮಾಡಬೇಕು. ಅದರ ಎದುರಿನಲ್ಲಿ ತ್ಯಾಗದ ಶ್ವೇತ

ಧ್ವಜವನ್ನು ಬಾನೆತ್ತರ ಊರಿ ಜಯಿಸಬೇಕು......ಒಟ್ಟಿನಲ್ಲಿ, ಈ ಸ್ವಾರ್ಥದ ಅಗ್ನಿಜ್ವಾಲೆಯಿಂದ ಮನುಷ್ಯಕುಲವನ್ನು ಸಲಹಬೇಕು. ಅದಕ್ಕೆ ಬಸವ ನಲ್ಲದೆ ಮತ್ತಾರು ಶಕ್ತರು?

ನೀನು ಒಲ್ಲೆನೆಂದ್ರೆ ಮತ್ತಾರುಂಟು ಬಸವ
ನೀನ್ಹೋಗಿ ಸಲಹೋ ಮುರುತ್ಯವ

ಅಯ್ಯೋ, ಮತ್ತೆ ಅದೇ ಶಿಕ್ಷೆಗೆ ತನ್ನ ಕುಲವನ್ನು ನೂಕಲೆತ್ನಿಸುತ್ತಿದ್ದಾನೆ ದಣಿ........ಬೇಡ, ನನ್ನ ದೊರೆ–ಎಂದು ಮೊರೆಯಿಡುತ್ತ ಕಂಬನಿಗರೆಯುತ್ತ ಹೇಳುತ್ತಾನೆ ಬಸವ:

ಹತ್ತಾರರೊಳಗೆ ತುಡುವೊಂದು ಹುಟ್ಟಿದರೆ
ಹ್ಯಾಂಗ್ಹೋಗಿ ಪೈರ ಹರಿದವೊ
ಹ್ಯಾಂಗ್ಹೋಗಿ ಪೈರ ಹರಿದವೊ ಶಿವಶಿವನೆ
ಹುಲಿ ತಿನ್ನಲೆಂದು ಶಪಿಸ್ಯಾರೊ

ಬಸವ ಹೇಳಿದುದೆಲ್ಲ ನಿಜವೆಂದು ಒಪ್ಪಿಕೊಳ್ಳುತ್ತಾನೆ ಶಿವ. ಆತನ ತಲೆ ನೇವರಿಸಿ ಬೆನ್ನಮೇಲೆ ಮೃದುವಾಗಿ ಕೈಯಾಡಿಸಿ ಮುಖದ ಬಳಿ ಮುಖ ವಿಟ್ಟು ಸಂತೈಸುತ್ತ ಮತ್ತೆ ಹೇಳುತ್ತಾನೆ:

ನೀನು ಒಲ್ಲೆನೆಂದ್ರೆ ಮತ್ತಾರುಂಟು ಬಸವ
ನೀನ್ಹೋಗಿ ಸಲವೋ ಮುರುತ್ಯವ

........ಹೌದು; ನಾವಲ್ಲದೆ ಬೇರೆ ಗತಿಯಿಲ್ಲ ಎಂಬುದು ದಣಿಯ ಚಿಂತೆ. ಆದರೆ ನಮ್ಮ ಪಾಡು?........ಕಷ್ಟ ಅನುಭವಿಸಿ ಅನುಭವಿಸಿ, ನಿತ್ಯವೂ ಬಿಡುವಿಲ್ಲದೆ ಶ್ರಮಿಸುತ್ತ, ಕಣ್ಣೀರ ಕಾಲುವೆಯಲ್ಲಿ ಈಜಿ ಬಾಳು ಸಾಗಿಸ ಬೇಕು. ನಿತ್ಯವೂ ಸಾವಿನ ಮೆಲುಗೈ ಎಂದು ಬಂದು ತಡವೀತೋ ಎನ್ನುತ್ತ ಹಂಬಲಿಸುತ್ತಿರಬೇಕು. ಸಾವು ಬಂದು ಶಾಂತಿ ಕೊಟ್ಟೀತು ಎಂದರೆ, ಬರುವ ಮೃತ್ಯುವಾದರೂ ನೇರ ಬಂದೀತೆ?—ಇಲ್ಲ.

ಗಟ್ಟದ ಹುಲ್ಲು ನೆಟ್ಟಗೆ ಐತಂತ
ಹೋಗಿ ಮೇಯಲು ನಿಲುತೇವೊ
ಹೋಗಿ ಮೇಯಲು ನಿಂತರೆ ಶಿವರಾಯ
ಗಟ್ಟದ ಪಟ್ಟಿ ಹುಲಿ ಬಂದು

ಗಟ್ಟದ ಪಟ್ಟೆಹುಲಿ ಬಂದು ಮುರಿವಾಗ
ಹೆತ್ತಯ್ಯ ಅವ್ವ ಮರುಗ್ಯಾರೊ

ತನಗೆ ಅಪಮೃತ್ಯು. ಮಾತ್ರವಲ್ಲ, ತನ್ನ ಅಪಮೃತ್ಯುವಿಗಾಗಿ ಹಡೆದ ತಂದೆ ತಾಯಿಗಳ ಗೋಳಾಟ. ಸತ್ತವರ ಸಂಕಟ ಒಂದು ಬಗೆಯದಾದರೆ ಉಳಿದವರ ಸಂಕಟ ಮತ್ತೊಂದು ಬಗೆಯದು. ಬಾಳು ವಿಷ ಕೊಟ್ಟಿತೆಂದು ಸಾವಿಗೆ ಶರಣಾದರೆ ಅದು ಕೂಡ ನಂಜಿನ ಕೊಡವನ್ನೆ ಎದುರು ಹಿಡಿದು ಸ್ವಾಗತಿಸುತ್ತದೆ........

ಹೆತ್ತಯ್ಯ ಅವ್ವ ಮರುಗ್ಯಾರೊ ಶಿವರಾಯ
ನಾನೊಲ್ಲೆನಯ್ಯ ಮರುತ್ಯವ

ಬಸವನ ಕರುಣಕಥನ ಶಿವನ ಎದೆಯನ್ನೂ ಒಂದು ಕ್ಷಣ ಚಲಿಸಿಬಿಡುತ್ತದೆ ........ಆದರೆ ಬಸವ ಮರ್ತ್ಯಕ್ಕಿಳಿಯಬೇಕಾದದ್ದು ಅನಿವಾರ್ಯ ಈಗ. ಏನು ಮಾಡುವುದು?............ಹೇಗಾದರೂ ಬಸವಯ್ಯನನ್ನು ಸಾಂತ್ವನಗೊಳಿಸ ಬೇಕು........ಮರ್ತ್ಯದ ಜನ ಸ್ವಾರ್ಥಿಗಳು, ನಿಜ. ಆದರೆ ಅವರ ಎದೆ ಯಲ್ಲೂ ಕರುಣೆ ಉಂಟು. ಕೊನೆಗೆ, ತಮ್ಮ ಸಲುವಾಗಿಯಾದರೂ ಬಸವಯ್ಯನನ್ನು ಒಪ್ಪವಾಗಿ ಬಾಳಿಸಿಕೊಂಡಾರು.

ಎತ್ತ ಕಾಯೋರು ಪುತ್ರಯ್ಯರೈದಾರೆ
ನೆತ್ತಿಗೆ ಕಲ್ಲ ಹೊಡೆದಾರೊ
ನೆತ್ತಿಗೆ ಕಲ್ಲ ಹೊಡೆದಾರೊ ಬಸವಯ್ಯ
ತಿನ್ನುವ ಹುಲಿಯ ಬಿಡಿಸ್ಯಾರೊ

ಒಡೆಯನ ಮಕ್ಕಳು ನಿನ್ನನ್ನು ಮಮತೆಯಿಂದ ಕಾಯ್ದುಕೊಳ್ಳುತ್ತಾರೆ— ಎಂದು ಶಿವ ಸಂತೈಕೆ ಹೇಳಿದರೆ, ಬಸವ ತನ್ನ ಅಪಮೃತ್ಯುವನ್ನೆ ನೆನೆಸಿ ಕೊಳ್ಳುತ್ತ,

ಮರುತ್ಯದ ಮ್ಯಾಲೆ ಹಾಂಗ್ಹೋಗಿ ಸತ್ತರೆ
ಹದ್ದು ಕಾಕೈಲ್ಲ ಎಳೆದಾವೊ
ಹದ್ದು ಕಾಕೈಲ್ಲ ಎಳೆದಾವೊ ಶಿವರಾಯ
ನಾನೊಲ್ಲೆನಯ್ಯ ಮರುತ್ಯವ

ಎನ್ನುತ್ತಾನೆ........ಶಿವ ಮತ್ತೆ ಅಭಯಕೊಟ್ಟು ಬಸವನನ್ನು ಹುರಿದುಂಬಿಸ ಲೆತ್ನಿಸುತ್ತಾನೆ:

ಮರುತ್ಯದ ಮ್ಯಾಲೆ ಹಾಂಗ್ಹೋಗಿ ಸತ್ತರೆ
ಮಾದರ ಚನ್ನಣನ ಕರಿಸ್ಯಾರು
ಮಾದರ ಚನ್ನಣನ ಕರಿಸ್ಯಾರು ಬಸವಯ್ಯ
ಒಡಲಿಗೆ ಸಮಾಧಿ ಮಾಡಿಸ್ಯಾರು
ಒಡಲಿಗೆ ಸಮಾಧಿ ಮಾಡಿಸ್ಯಾರು ಬಸವಯ್ಯ
ನೀನ್ಹೋಗಿ ಸಲಹೋ ಮರುತ್ಯಾವ

ಮೌನವಾಗಿ ನಿಂತು ಯೋಚಿಸತೊಡಗಿದ ಬಸವ. ಕಾರಣವಿಲ್ಲದೆ ಶಿವ ತನ್ನನ್ನು ಮರ್ತ್ಯಕ್ಕೆ ಕಳುಹಿಸುತ್ತಿಲ್ಲ. ಯಾವ ಒಳಿತನ್ನು ಸಾಧಿಸುವ ಸಲುವಾಗಿ ಈ ಆಜ್ಞೆಯೋ. ಶಿವನ ಇಚ್ಛೆ. ಶಿವನ ಇಚ್ಛೆಗೆ ಒದಗುವುದಕ್ಕಿಂತ ಮಿಗಿಲಾದ ಸಾಫಲ್ಯ ಇನ್ನಾವುದು ತನ್ನ ಜೀವಕ್ಕೆ? ಯಾವ ಕೃಪೆಗಾಗಿ ಹದಿನಾಲ್ಕು ಲೋಕದ ಸರ್ವಜೀವಗಳೂ ಯುಗಯುಗಗಳ ಕಾಲ ನರಕದಲ್ಲಿ ನರಳಲು ಕೂಡ ಸಿದ್ಧವಾಗಿರುವುವೊ ಅಂತಹ ಶಿವಕೃಪೆ ತಾನಾಗಿಯೇ ಒದಗಿದಮೇಲೆ, ಮರ್ತ್ಯದಲ್ಲಿ ಕೆಲವುದಿನ ಪಾಡುಪಡುವುದೊಂದು ದೊಡ್ಡದೆ?

—ಬಸವಣ್ಣ ಆಲೋಚನೆಯಲ್ಲಿ ಮುಳುಗಿ ಮಾತಿಲ್ಲದೆ ನಿಂತಿರಲು ಶಿವ ಕೊನೆಯದಾಗಿ, ಆಜ್ಞೆಯೆಂಬಂತೆ ನಿಶ್ಚಿತವಾಗಿ, ಒಲವೆಂಬಂತೆ ಮೃದುವಾಗಿ, ಅನಿವಾರ್ಯವೆಂಬಂತೆ ದೃಢವಾಗಿ, ಮಂಗಲವೆಂಬಂತೆ ಸವಿಯಾಗಿ ಹೇಳಿದ:

ಮರುತ್ಯದ ನೆಲದಾಗೆ ನಿನ ಕುಲ ಬೆಳೆದರೆ
ಕರುಣೆಯ ಹಣ್ಣ ಉದುರ್ಯಾವೊ
ಕರುಣೆಯ ಹಣ್ಣ ಉದುರ್ಯಾವೊ ಬಸವಯ್ಯ
ನೀನ್ಹೋಗಿ ಸಲಹೋ ಮರುತ್ಯವ
ನೀನು ಒಲ್ಲೆನೆಂದ್ರೆ ಮತ್ಯಾರುಂಟೊ ಬಸವ
ನೀನ್ಹೋಗಿ ಸಲಹೋ ಮರುತ್ಯವ

ಶಿವನ ಆಜ್ಞೆಗೆ ಶರಣೆಂದು ನಿಂತ ಬಸವ. ಮತ್ತೆ ವಾದಿಸಲಿಲ್ಲ, ಮತ್ತೆ ಕಣ್ಣೀರು ಕರೆಯಲಿಲ್ಲ, ಮತ್ತೆ ಗೋಳಾಡಲಿಲ್ಲ.

........ಶಿವನ ಇಚ್ಛೆಯಂತೆ ಮರ್ತ್ಯದಲ್ಲಿ ಮತ್ತೆ ಬಸವ ಸಂತಾನದ ಅವತಾರವಾಗಿ ಬೆಳೆಯತೊಡಗಿತು. ತನ್ನ ಒಡೆಯನಾದ ನಂಜುಂಡನ

ಆದರ್ಶದಂತೆ ಮರ್ತ್ಯದ ಮಾನವರ ಸ್ವಾರ್ಥದ ನಂಜನ್ನು ತಾನು ಕೊಂಡು ಭೂಮಿಯನ್ನು ಸಿರಿವಂತೆಯಾಗಿ ಮಾಡಿದ ಬಸವ. 'ಸೇವೆ' ಯೆಂಬ ಪದದ ಜೀವಂತವಾದ ಅನಂತ ಭಾಷ್ಯದಂತೆ ಬಸವನ ಕುಲ ಬೆಳೆಯಿತು. ಕರುಣೆಯ ಕಣ್ಣಾಗಿ ಬೂಳೆದು, ಒಲವಿನ ಹಣ್ಣಾಗಿ ಬೆಳೆದು, ಶಿವನ ಕೃಪೆಯಾಗಿ ಜಗತ್ತನ್ನೆಲ್ಲ ಮೆಯ್‌ದಡವಿತು.

* * * *

ಕರುಣೆಯ ಕಣ್ಣಿಗೆ ಜಯವಾಗಲಿ, ಒಲವಿನ ಹಣ್ಣಿಗೆ ಜಯವಾಗಲಿ, ಶಿವನ ಕೃಪೆಗೆ ಜಯವಾಗಲಿ.

ದೀಪಾವಳಿಯ ಗೋಪೂಜೆಯ ದಿನ ಮರ್ತ್ಯದ ಮಾನವರು ಈ ಅದ್ಭುತ ಕಥೆಯನ್ನು ನೆನೆಸಿಕೊಂಡು ಪುಳಕಿತರಾಗುತ್ತಿದ್ದಾರೆ. ಚೆಲುವಾದ ಪುಟ್ಟ ಬಾಲಿಕೆಯರು ಮೆಯ್‌ತುಂಬ ಸಿಂಗಾರ ಮಾಡಿಕೊಂಡು ಕೈಯ್ಯಲ್ಲಿ ಆರತಿ ಹಿಡಿದು ಹಾಡುತ್ತಾರೆ:

ಎತ್ತಿರಾರತಿಯ–ಬಸವಯ್ಗೆ
ಮುತ್ತಿನಾರತಿಯ

ಈ ಪುಟ್ಟ ಬಾಲಕಿಯರು ತನಗಾಗಿ ಆರತಿ ಹಿಡಿದು ಕಾಯುತ್ತಿರಲು ಶೃಂಗಾರದ ಬಸವ ಸೊಬಗು ಚೆಲ್ಲುತ್ತ ಕುಣಿದು ಬರುತ್ತಾನೆ:

ಬಾಲವೆತ್ತಿ ಓಡಿ–ಬಸವಯ್ಯ
ಧೂಳೆನಾಡುತ ಬಂದ
    ಎತ್ತಿರಾರತಿಯ–ಬಸವಯ್ಗೆ
    ಮುತ್ತಿನಾರತಿಯ
ಕೋಡಲಿ ದಿಣ್ಣೆ ಬಗೆದು–ಬಸವಯ್ಯ
ಹೆಗಲ ಕುಣಿಸುತ ಬಂದ
    ಎತ್ತಿರಾರತಿಯ–ಬಸವಯ್ಗೆ
    ಮುತ್ತಿನಾರತಿಯ
ಹೊರೆ ಹೂ ಬಾಸಿಂಗ ತೊಟ್ಟು–ಬಸವಯ್ಯ
ದೊರೆಮಗ ಬಂದ್ಹಂಗೆ ಬಂದ
    ಎತ್ತಿರಾರತಿಯ–ಬಸವಯ್ಗೆ
    ಮುತ್ತಿನಾರತಿಯ

—ವರ್ಷದಲ್ಲಿ ಒಂದು ದಿನವಾದರೂ, ತ್ಯಾಗದ ಕಥೆಯನ್ನು ನೆನೆದು ಅದಕ್ಕೆ ಶರಣೆನ್ನುವ ಬುದ್ಧಿ ಎಂದೆಂದಿಗೂ ಬರುತ್ತಿರಲಿ ನಮಗೆ.

ಬಸವಗೆ ಬಸವೆನ್ನಿರೋ
ಬಸವಯ್ನ ಪಾದಕೆ ಶರಣೆನ್ನಿರೋ........

———————

## ೬. ಕಲಸೆ ದೇಗುಲಕೆ ಕದನಾಗು

ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೋಕಿನಲ್ಲಿ 'ಕಲಸೆ' ಎಂಬ ಹೆಸರಿನ ಗ್ರಾಮವೊಂದಿದೆ. ಒಂದು ಕಾಲದಲ್ಲಿ, ಮಲೆನಾಡು ಸಾಮ್ರಾಜ್ಯ ಕಟ್ಟಿ ಮೆರೆಯುತ್ತಿದ್ದಂದು, ಈ ಊರು ವೈಭವದಿಂದ ಪ್ರಖ್ಯಾತವಾಗಿದ್ದಿತು. ಆ ಪೂರ್ವ ವೈಭವದ ಅವಶೇಷವೆಂಬಂತೆ ಇಂದಿಗೂ ಆ ಹಳ್ಳಿಯಲ್ಲಿ ಹಲವು ಸುಂದರ ದೇವಾಲಯಗಳಿದ್ದಾವೆ. ಇಕ್ಕೇರಿ ಕೆಳದಿ ಮುಂತಾದ ಈ ಪ್ರಾಂತ್ಯದ ಪ್ರಸಿದ್ಧ ದೇವಾಲಯಗಳಂತೆಯೇ ಇವಾದರೂ ನೋಡಿದವರನ್ನು ಬೆರಗುಪಡಿಸುವಂತಿವೆ. ಆ ಕಲ್ಲಿನ ಕಟ್ಟಡವಾಗಲಿ ಕೆತ್ತಿದ ಚಿತ್ರಗಳಾಗಲಿ ಆ ಕಾಲದ ಶಿಲ್ಪಚಮತ್ಕೃತಿಗೆ ಸಾಕ್ಷಿಯಾಗಿವೆ. ಎಲ್ಲ ಸುಂದರ ದೇವಾಲಯ ಕುರಿತು ಇರುವಂತೆಯೇ, ಈ ದೇವಾಲಯಗಳನ್ನೂ ಜಕ್ಕಣಾಚಾರಿ ನಿರ್ಮಿಸಿದನೆಂದು ಪ್ರತೀತಿ ಇದೆ. ಇವುಗಳಲ್ಲೆಲ್ಲ ಮುಖ್ಯವಾದುದು ಮಲ್ಲಿಕಾರ್ಜುನ ದೇವಾಲಯ. ದೇವಸ್ಥಾನದ ಎದುರಿನಲ್ಲಿ ಒಂದು ಅತಿ ನಯವಾದ ಬಸವನ ವಿಗ್ರಹ. ಮುಂಭಾಗದಲ್ಲಿ ಬೃಹದಾಕಾರದ ಬಾಗಿಲು. ಬಾಗಿಲಿನ ಮೇಲಿರುವ ಕೆತ್ತನೆಯ ಕುಸುರುಗೆಲಸ ಅಚ್ಚರಿಪಡುವಂಥದು. ಆ ಶಿವಾಲಯದ ಬಾಹ್ಯಸೌಂದರ್ಯ ಹಾಗೂ ಆಂತರಿಕ ಭವ್ಯತೆಗಳ ಸೂಚ್ಯ ಪ್ರತಿಮೆಯಾಗಿ ಕಡೆದು ನಿಲ್ಲಿಸಿರುವಂತೆ ತೋರುತ್ತದೆ ಆ ಬಾಗಿಲು........ ಇಂತಹ ಉನ್ನತ ಕಲೆಮಾನವನಿಂದ ನಿರ್ಮಿತವಾಗಿರಬಹುದೆ? ಮನುಷ್ಯ ಸಹಜವಾದ ಅನೇಕಾನೇಕ ಕುಂದುಕೊರತೆಗಳಲ್ಲಿ ಅಣುವೂ, ಅಣುವಿನ ಛಾಯೆಯೂ ಸುಳಿಯದಿರುವ ಈ ಕಲಾಕೃತಿಯನ್ನು ಸಾಮಾನ್ಯ ಶಿಲ್ಪಿಯೊಬ್ಬ ಉಳಿಯಾಡಿಸಿ ಮೂಡಿಸಲು ಸಾಧ್ಯವೆ?........ಹಾಗೆಂದು ಅಲ್ಲಿನ ಜನ ಒಪ್ಪಿಕೊಳ್ಳಲಾರರು. ಅಲ್ಲದಿದ್ದರೆ, ಯಾವ ದೇವಶಿಲ್ಪಿಯ ಹಸ್ತಪವಾಡವಿರಬಹುದು ಅದು?........

ಅದೊಂದು ಕಥೆ. ಕೇಳಿ:

ದೇವರೀರಯ್ಯ ಮಡದಿಯ ಬಿಡುತಾನೆಂದು
ಈರೇಳು ರಾಜ್ಯದಿ ಸುದ್ದಿ
ದೇವರೀರಯ್ಯ ಕಾಳಿಯ ಬಿಡುತಾನೆಂದು
ಈರೇಳು ಲೋಕದಿ ಸುದ್ದಿ

ವೀರಭದ್ರಸ್ವಾಮಿ ತನ್ನ ಪತ್ನಿಯಾದ ಭದ್ರಕಾಳಿಯನ್ನು ಬಿಟ್ಟುಬಿಡುವರೆಂಬ ಸುದ್ದಿ ಈಗ ಎಲ್ಲೆಲ್ಲೂ ಗುಡುಗಾಡುತ್ತಿದೆ. ಲೋಕದಲ್ಲೆಲ್ಲ ಸುದ್ದಿಯಾಗಿರುವಾಗ ಅದು ತಂದೆಯ ಕಿವಿಗೆ ಬೀಳದಿದ್ದೀತೆ? ಸ್ವಾಮಿಯ ತಂದೆ ಈ ಸಮಾಚಾರವನ್ನು ಕೇಳಿ ಬೆರಗಾಗಿಹೋದರು....ಇದೇನು ಕೆಟ್ಟಕಾಲ ಬಂದಿತು? ಎಂದಿಲ್ಲದ ದುಷ್ಟಬುದ್ಧಿ ಇಂದು ತನ್ನ ಮಗನಿಗೆ ಬರಬೇಕೆ? ಅವರು ಈ ಸುದ್ದಿಯನ್ನು ನಂಬುವುದೇ ಕಠಿನವಾಯಿತು. ಹಾಗೆಂದು, ಒಮ್ಮೆ ಹಾದು ಹೋದುದಲ್ಲ. ಮತ್ತೆ ಮತ್ತೆ ಬಂದು ಕಿವಿಯಿರಿಯುತ್ತಿದೆ....ತನ್ನ ಪುತ್ರ ಮಡದಿಯನ್ನು ತೊರೆದು ಲೋಕದಲ್ಲಿ ಅಲ್ಲದುದನ್ನು ಮಾಡುವುದೆ? ಇಂಥ ಕಾರ್ಯ ಮಾಡಲು ಸಾಮಾನ್ಯ ಮನುಷ್ಯರೂ ಹಿಂದೆಮುಂದೆ ನೋಡುವಾಗ ದೇವಕುಲದ ಶ್ರೇಷ್ಠವರ್ಗದಲ್ಲಿರುವ ತಮ್ಮ ಕುಟುಂಬದಲ್ಲಿ ಇಂಥ ಅಪಚಾರ ........ತನ್ನ ಪುತ್ರ, ದೇವಗಣದಲ್ಲಿನ ಏಕೈಕ ವೀರ, ಇಂತಹ ಕಾರ್ಯಕ್ಕೆ ಮನ ಕೊಡುವನೆ? ಅಷ್ಟು ಅವಿಚಾರವಾಗಿ ದುಡುಕುವನೆ?........ಹಾಗಾದರೆ ಈ ಸುದ್ದಿ?........ಹಾರಿಕೆಯದಿದ್ದರೂ ಇರಬಹುದು. ಲೋಕದಲ್ಲಿ, ಇಂತಹ ಕೈಕಾಲಿಲ್ಲದ ಸುದ್ದಿಗಳು ಎಲ್ಲೆಡೆಗೂ ಹಾರುತ್ತಹೋಗುವುದು ಸುಲಭ........ಕೇವಲ ಬಯಲ ಯೋಚನೆಯಿಂದ ಯಾವ ನೆಲೆ ಸಿಕ್ಕೀತು?

ಅಷ್ಟೆಂಬ ವಾತ ಕೇಳ್ಯಾನು ಹಡೆದಯ್ಯ
ಈರಯ್ಯನರಮನೆಗೆ ನಡೆದನು

—ಅಲ್ಲಿ, ವೀರಭದ್ರದೇವರ ಅರಮನೆಯಲ್ಲಿ: ನಲವಿನ ನೊರೆಗರೆಯಬೇಕಾಗಿದ್ದ ಆ ಸೌಧದಲ್ಲಿ ಎಲ್ಲೆಲ್ಲಿಯೂ ಮೌನ. ಮೌನದ ನಡುವೆ ಆಗೊಮ್ಮೆ ಈಗೊಮ್ಮೆ ಹೆಡೆಯಾಡಿಸಿ ಮತ್ತೆ ಮಲಗುವ ಕೋಪ. ಎಲ್ಲೆಲ್ಲೂ ತೆರವು; ಅಸಹ್ಯವಾದ ತೆರವು........ಆ ರಾಜಗೃಹದ ಎರಡು ಕಣ್ಣುಗಳಾಗಿ, ಸೂರ್ಯಚಂದ್ರಮರಾಗಿ ಕಂಗೊಳಿಸಬೇಕಿದ್ದ ದೇವದಂಪತಿಗಳು ಎಲ್ಲಿಯೋ ಹೇಗೋ ಇರುವಂತೆ ಇದ್ದಾರೆ........ಮನೆಯ ಹೊರ ಉಪ್ಪರಿಗೆಯಲ್ಲಿ

ಶ್ಮಶಾನವನದಂತೆ ಅಸಹ್ಯವಾಗಿ ತೋರುವ ಎದುರಿನ ಉದ್ಯಾನವನ್ನು ನೋಡುತ್ತ ಯಾವುದೋ ಯೋಚನೆಯಲ್ಲಿ ಮಂಚದ ಮೇಲೆ ಒರಗಿದ್ದಾಳೆ ಭದ್ರಕಾಳಿ, ಕಲ್ಲಿನ ಪ್ರತಿಮೆಯಂತೆ. ತನ್ನ ಸಖಿಯರನ್ನೆಲ್ಲ ಕಳೆದು ಏಕಾಂಗಿಯಾಗಿ ನೀರವವಾಗಿ ಮರುಗುತ್ತ ಕುಳಿತಿದ್ದಾಳೆ........ಅದೇ ವೇಳೆಯಲ್ಲಿ ಭದ್ರಕಾಳಿಯ ಮಾವ ತನ್ನ ಪುತ್ರನನ್ನು ನೋಡುವ ಸಲುವಾಗಿ ಬರುತ್ತಿದ್ದರು.

ಮಾವ ಬರುವ ಸುಳಿವ ಅಷ್ಟು ದೂರದಿ ಕಂಡು
ಕುಂತ ಮಂಚದಿಂದ ಇಳಿದಳು

—ದೂರದಲ್ಲಿ ಬರುತ್ತಿದ್ದ ಮಾವನನ್ನು ಕಂಡು ಆಕೆಗೆ ಬೆರಗಾಯಿತು. ಅಸಹ್ಯ ಚಿಂತೆಗಳ ಕೋಡುತಣ್ಪಿನಲ್ಲಿ ಚಿತ್ತ ಹೆಪ್ಪುಗಟ್ಟಿ ಶಿಲೆಯಂತೆ ಕುಳಿತಿದ್ದ ಭದ್ರಕಾಳಿ ಜಗ್ಗನೆ ಕೆಳಗಿಳಿದಳು........ತುಂಬ ಅಪರೂಪವಾಗಿ ಬರುತ್ತಿದ್ದಾರೆ ಮಾವ. ಏಕಿರಬಹುದು? ........ಒಮ್ಮೆ ತಮ್ಮ ವಿರಸವನ್ನು ಕೇಳಿ........ಏನೋ ಯಾರು ಬಲ್ಲರು?........

ಕುಂತ ಮಂಚದಿಂದ ಇಳಿದಳು ಭದ್ರಕಾಳಿ
ಚೆಂಬಿಲೆ ಹಣಿಯುದಕ ಮಗೆದಳು

ಆ ವೇಳೆಗೆ ಮಾವ ಮನೆಯ ಮೆಟ್ಟಿಲಮೇಲೆ ಕಾಲಿರಿಸುತ್ತಿದ್ದರು.

ಚೆಂಬಿಲೆ ಹಣಿಯುದಕ ಮಗೆದಳು ಭದ್ರಕಾಳಿ
ಮಾವನ ಸಿರಿಪಾದ ತೊಳೆದಳು

ಅಪರೂಪವಾಗಿ ಬಂದ ಮಾವನನ್ನು ಸಂತೋಷದಿಂದೆಂಬಂತೆಯೇ ಸ್ವಾಗತಿಸಿದಳು. ವಿನಯದಿಂದ ಆತನ ಕಾಲು ತೊಳೆದು ಪಾದಪ್ರಸಾದವನ್ನು ಶಿರದಲ್ಲಿ ಧರಿಸಿದಳು.

ಮಾವನ ಸಿರಿಪಾದ ತೊಳೆದಳು ಭದ್ರಕಾಳಿ
ಕೊಡಲು ಚಳಿಮಂಚ ಅಣಿಮಾಡಿ
ಕೊಡಲು ಚಳಿಮಂಚ ಅಣಿಮಾಡಿ ಮಾವಯ್ಯಗೆ
ಬಾಯಾರಿಗೆ ಕೊಟ್ಟು ನೊರೆಹಾಲು

ಮಾವನನ್ನು ಆದರದಿಂದ ಸತ್ಕರಿಸಿದಳು. ಆತನ ಮತ್ತು ಮನೆಯವರ ಕ್ಷೇಮಕುಶಲಗಳನ್ನು ವಿವರವಾಗಿ ಕೇಳಿದಳು........ಮಾವ ಎಲ್ಲವನ್ನೂ

ಗಮನಿಸಿದರು. ಜೊತೆಯಲ್ಲಿ ಪತಿಯಿಲ್ಲದೆ ಸಂಗಡ ಸಖಿಯರೂ ಇಲ್ಲದೆ ಒಂಟಿಯಾಗಿ, ಖಿನ್ನಮುಖದಲ್ಲೆ ನಗುವನ್ನು ಸಾವರಿಸಿಕೊಂಡ ಈಕೆಯನ್ನು ಕಂಡಾಗಲೇ ತಾನು ಕೇಳಿದ ಕಟು ಸುದ್ದಿ ನಿಜವಾದುದೆಂದು ಅರ್ಥವಾಯಿತು. ಮದುವೆಯಾಗಿ ಬಹುದಿನ ಕಳೆಯದ ಈ ನಡುಹರಯದಲ್ಲಿ ಗಂಡಹೆಂಡಿರ ನಡುವಣ ವಿರಸಕ್ಕೆ ಏನು ಕಾರಣವಿರಬಹುದು? – ತಿಳಿಯುವ ಕುತೂಹಲ ಉಕ್ಕುತ್ತಿತ್ತು ಅವರಲ್ಲಿ. ಆದರೆ ಒಮ್ಮೆಲೇ ಅವನ್ನೆಲ್ಲ ಹೇಗೆ ಕೇಳುವುದು? 'ನೀನು ಒಳಿತಾಗಿದ್ದೀಯಾ ತಾಯಿ?' ಎಂದು ಪ್ರಶ್ನಿಸಿದರು. 'ಹ್ಞು' ಎಂದಳು ಆಕೆ. ಅನಂತರ ತಮ್ಮ ಕೆರಳುವ ಕುತೂಹಲಕ್ಕೆ ಪೀಠಿಕೆ ಹಾಕಿದರು:

ಅದು ಏನೆ ಭದ್ರುಕಾಳಿ ಒಬ್ಬಳೆ ಐದೀಯೆ
ದೇವರಿಲ್ಲೇನೆ ಸುಳಿವಿಲ್ಲ

ಆಕೆಗೆ ಸ್ಪಷ್ಟವಾಯಿತು, ತಮ್ಮ ಸುದ್ದಿ ಅವರ ಕಿವಿಯನ್ನೂ ಸೋಂಕಿರುವುದೆಂದು....ಮಾವ ಮನೆಗೆ ಬಂದಾಗ ಗಂಡಹೆಂಡಿರಿಬ್ಬರೂ ಕೂಡಿ ಅವರನ್ನು ಸ್ವಾಗತಿಸಬೇಕಿತ್ತು, ಆದರಿಸಬೇಕಿತ್ತು....ಒಮ್ಮೆ, ಬೇರೆ ಸಂದರ್ಭದಲ್ಲಿ ಮಾವ ಈ ಮಾತು ಕೇಳಿದ್ದರೆ ಸಹಜವೆನಿಸಬಹುದಿತ್ತು. ಆದರೆ, ಈಗ– ತನ್ನ ಅಳಲನ್ನೆ ಕುಕ್ಕುವ ಮಾತು. ಚಿಮ್ಮಿ ಬರುವ ದುಃಖವನ್ನು ಒತ್ತಿಟ್ಟು ಹೇಳಿದಳು ಭದ್ರಕಾಳಿ:

ಉಪ್ಪರಿಗೆ ಒಳಗೆ ಪಟ್ಟಿ ಹಾಸಿನ ಮ್ಯಾಲೆ
ದೇವರು ಮನೆ ಸ್ವಾಮಿ ಒರಗ್ಯಾರು

....ಗಂಡಹೆಂಡಿರಲ್ಲಿ ಏನೋ ನಡೆದಿದೆ; ಅದಂತೂ ನಿಶ್ಚಯ. ಆದರೆ ಆ ವಿಷಯವನ್ನೆಲ್ಲ ಹೆಣ್ಣಿನ ಕೂಡ ಕೇಳುವುದಲ್ಲ. ತನ್ನ ಮಗನ ಬಳಿ ಹೋಗಿ ಅವನನ್ನೆ ವಿಚಾರಿಸುವುದು ಲೇಸು-ಎಂದುಕೊಂಡರು ಮಾವ.

ಅಷ್ಟೆಂಬ ಮಾತ ಕೇಳ್ಯಾನು ಹಡೆದಯ್ಯ
ಉಪ್ಪರಿಗೆ ಒಳಗೆ ನಡೆದನು

ಸೊಸೆಯನ್ನು ಅಲ್ಲಿಯೇ ಬಿಟ್ಟು, ಉಪ್ಪರಿಗೆಯ ಒಳ ಕೋಣೆಗೆ ಹೋಗಿ ನೋಡುವಾಗ, ಅಲ್ಲಿ,

ಪಟ್ಟೆಮಂಚದ ಮ್ಯಾಲೆ ಕೈಯ ತಲೆಯಡಿಗಿಟ್ಟು
ಮಲಗಿಸಿದ ವೀರಭದ್ರ ಕಂಡನು

ಸಿದ್ರೆ ಬಂದಿಲ್ಲವೆಂದು ಸಹಜವಾಗಿ ತಿಳಿಯುತ್ತದೆ. ಯಾವುದೋ ದೀರ್ಘ ಆಲೋಚನೆಯಲ್ಲಿ ಮುಳುಗಿರುವಂತೆ ಮುಚ್ಚುಗಣ್ಣಿನ ಮುಖ ಗಂಟುಕಟ್ಟಿದೆ.

ಮವಡಿಸಿದ ಈರಭದ್ರ ಕಂಡನು ಹಡೆದಯ್ಯ
ದನಿಯೆತ್ತಿ ಮಗನ ಕರೆದನು

ತಂದೆಯ ಏರುದನಿಯನ್ನು ಕೇಳಿ ಬೆದರಿ, ಮಂಚದಿಂದ ಜಗ್ಗನೆ ನೆಲಕ್ಕಿಳಿದು ತಂದೆಗೆ ನಮಸ್ಕರಿಸಿದ ವೀರಭದ್ರ. ತಂದೆಯ ಮುಖವನ್ನು ನೋಡುವಾಗಲೇ ಅವರು ಬಂದ ಕಾರಣದ ಸೂಚನೆಯಾಯಿತು.... ಅನಿರೀಕ್ಷಿತವೇನಲ್ಲ, ತಂದೆ ಹೀಗೆ ಬಂದಾರೆಂದು ಮೊದಲೇ ಹೊಳೆದಿದ್ದಿತು.... ಏನು ಮಾಡಲೂ ತಿಳಿಯದಾಯಿತು ವೀರಭದ್ರಸ್ವಾಮಿಗೆ. ಮನೆಯ ಕುಶಲವನ್ನು ಕೇಳುವ ಒಂದು ಮಾತು ಕೂಡ ಹೊರಡಲಿಲ್ಲ. ತಂದೆಯ ಮುಖವನ್ನು ನೇರ ನೋಡುವುದೂ ಆಗಲಿಲ್ಲ. ತಂದೆಯ ಮುಳ್ಳುನೋಟ ವನ್ನು ತಪ್ಪಿಸಿಕೊಂಡು ಎತ್ತಲೋ ಕಣ್ಣು ತಿರುಗಿಸಿ, ಸನ್ನಿವೇಶದ ಬಿಗುವನ್ನು ತುಸು ಸಡಲಿಸಬೇಕೆಂದಿರುವಷ್ಟರಲ್ಲೆ,

ದನಿಯೆತ್ತಿ ಮಗನ ಕೇಳ್ಯಾನು ಹಡೆದಯ್ಯ
ಮಡದಿ ಬಿಡುವುದಕೆ ಬಗೆಯೇನು

—ವೀರಭದ್ರ ಅವಾಕ್ಕಾದ. ಪ್ರಶ್ನೆ ಹೀಗೆ ನೇರವಾಗಿ ಬಂದೀತೆಂದು ಆತ ಎಣಿಸಿರಲಿಲ್ಲ. ಥತ್ತೆಂದು ಎದುರು ಬಂದ ಪ್ರಶ್ನೆಗೆ ಮುಖಗೊಡಲಾರದೆ ತಲ್ಲಣಿಸಿದ....ಹೀಗೆ ನೇರವಾಗಿ ಫಕ್ಕನೆ ಬಂದ ಪ್ರಶ್ನೆಗೆ ಏನು ಉತ್ತರ ಕೊಡುವುದು?....ಮಾತು ಮಾತು ಅರಳಿ ಸನ್ನಿವೇಶ ತಾನಾಗಿ ಏರುತ್ತ ನಡೆದರೆ, ಬುದ್ಧಿ ಮಸೆದು ನಿಲ್ಲುತ್ತದೆ. ಯೋಚನೆಯಿಲ್ಲದೆ ಉತ್ತರ ಹರಿಯುತ್ತದೆ....ವೀರಭದ್ರ ತುಸುಹೊತ್ತು ಮೌನವಾಗಿ ನಿಂತು ಏನು ಉತ್ತರ ಹೇಳುವುದೆಂದು ಮನದಲ್ಲೆ ಎಣಿಸತೊಡಗಿದ. ಮಗನ ಮೌನವನ್ನು ಮತ್ತೆ ಮುರಿದು ಗದರಿಸಿದರು ತಂದೆ: ಮಡದಿ ಬಿಡುವುದಕೆ ಬಗೆಯೇನು?—ಎಂದು. ವೀರಭದ್ರ ಮನಸ್ಸಿನಲ್ಲಿ ಗಡಿಬಿಡಿಯಿಂದ ಹವಣಿಸಿಕೊಂಡ ಕುರುಡು ಕಾರಣವನ್ನೆ ಹೆದರುತ್ತ ಮೆಲ್ಲಗೆ ಬಿನ್ನವಿಸಿಕೊಂಡ:

ಮಾಳಿಗೆ ಒಳಗೆ ಸಿಸ್ತ್ರೆ ನಿಂತಿದ್ದಳು
ಒಳಬಂದ ನಾನು ಹೆದರಿದೆ

ಒಳಬಂಪ ನಾನು ಹೆದರಿದೆ ಅಪ್ಪಯ್ಯ
ಕಾಳಿ ರೂಪಿಗೆ ನಡುಗಿಪೆ

—ಮಾಳಿಗೆಯಲ್ಲಿ ನಿಂತ ಮಡದಿಯನ್ನು ನೋಡಿ ಬೆದರಿಬಿಟ್ಟನಂತೆ. ಆಕೆಯ ಘೋರರೂಪ ಈತನನ್ನು ನಡುಗಿಸಿಬಿಟ್ಟಿತಂತೆ....—ಆತ ಹೇಳಿದ ಮಾತು ದಿಟವೊ ಸಟೆಯೊ ಯಾರು ಬಲ್ಲರು? ಗಂಡ ಹೆಂಡಿರ ನಡುವಣ ಆಂತರ್ಯದ ರಹಸ್ಯವಿರಸ. ಅದರ ಕಾರಣ ಯಾವುದೂ ಇದ್ದೀತು........ ತಂದೆ ಮತ್ತೆ ಮತ್ತೆ ಯೋಚಿಸಿದರು. ಬಗೆಹರಿಯಲಿಲ್ಲ. ಒಟ್ಟಿನಲ್ಲಿ, ಯಾವ ಕಾರಣವೇ ಇರಲಿ, ಹೀಗಾಗಬಾರದು. ಒಮ್ಮೆ ಕೂಡಿದ ಗಂಡು ಹೆಣ್ಣು ಮತ್ತೆ ಅಗಲುವುದು ಯೋಗ್ಯವಲ್ಲ. ತಮ್ಮ ಕುಲ, ತಮ್ಮ ಸ್ಥಾನಮಾನ–ಇವುಗಳಿಗಂತೂ ಇಂತಹ ಅಗಲಿಕೆ ಮಸಿ ಬರೆದಂತೆ. ಅದನ್ನು ಮಗನೂ ಅರಿಯಬೇಕಿತ್ತು. ಆತ ಮರೆತಿರುವಾಗ ಹೇಗೆ ಆತನಿಗೆ ಅರಿವುಮಾಡುವುದು? ಬೆಳೆದು ಮದುವೆಯಾದ ಮಗನನ್ನು ಬೆದರಿಸುವುದು ಸಾಧ್ಯವೆ? ತಾನು ಕೋಪಿಸಿದರೆ ಆ ಕೋಪ ವ್ಯರ್ಥ, ಅಥವಾ ಆ ಕೋಪದಿಂದ ಮತ್ತೊಂದು ದುಷ್ಪರಿಣಾಮವಾದೀತು. ಹೇಗಾದರೂ ಮಗನಿಗೆ ಸಾವಧಾನವಾಗಿ ತಿಳಿಯಹೇಳಿ ನಂಬಿಸುವುದೊಳಿತು–ಎಂದುಕೊಂಡರು ತಂದೆ. ಹುಬ್ಬುಗಂಟು ಸಡಿಲಿಸಿ ಅಲ್ಲಿಯೇ ವೀರಭದ್ರನ ಮಂಚದಮೇಲೆ ಕುಳಿತು, ಮಗನನ್ನೂ ಬದಿಯಲ್ಲೆ ಕುಳ್ಳಿರಿಸಿಕೊಂಡು, ಸಾವಧಾನವಾಗಿ ಕೇಳಿದರು, ಅಗಲಿಕೆಯ ನಿಜವಾದ ಕಾರಣವನ್ನು ಹೇಳುವಂತೆ. ತಂದೆಯ ಕೋಪ ಇಳಿದಂತೆ ವೀರಭದ್ರನ ಅಂಜಿಕೆ ಇಳಿದು ಕೋಪ ಏರಿತು. ಮಡದಿಯ ಮೇಲಿನ ಆಕ್ರೋಶದಿಂದ ಹೇಳಿದ:

ಕಾಳಿ ರೂಪಿಗೆ ನಡುಗಿದ ಹಡೆದಯ್ಯ
ಯಾ ತಾಯಿಯುವಳ ಜನಿಸ್ಯಾಳು
ಯಾ ತಾಯಿಯುವಳ ಜನಿಸ್ಯಾಳು ಮೂದಿನಕೆ
ಹಲವಳಿಯಬಾರದೆ ಶಿವಶಿವ

ಸಿಟ್ಟಿನಲ್ಲಿ ತಂದೆಗಿಂತ ತಾನೇನೂ ಕಡಿಮೆಯಲ್ಲವೆಂದು ತೋರಿಸಿದ ವೀರಭದ್ರ. ಏನೇ ಆಗಲಿ, ಆಕೆಯೊಡನೆ ತಾನು ಇನ್ನೊಂದು ಕ್ಷಣವೂ ಬಾಳಲಾರೆನೆಂದು ಖಂಡುತುಂಡಾಗಿ ಹೇಳಿದ. ತಂದೆ ಯೋಚಿಸಿದರು: ಯಾವುದು ಚೆಲುವು? ದೇಹದ ಮಾಟವೆ? ಉಡುಗೆಯ ಒಪ್ಪವೆ? ಗುಣದ

ಸೊಬಗೆ?—ಗುಣದ ಚೆಲುವನ್ನು ಮೀರಿಸುವ ಚೆಲುವು ಯಾವುದು?.... ಆದರೂ, ಹರೆಯದ ಕಣ್ಣು ನೋಟದ ಸೊಬಗನ್ನೂ ಬಯಸುತ್ತದೆ. ಆಗಲಿ, ಅದಕ್ಕೂ ಉಪಾಯವುಂಟು:

ಮಡದಿ ಕಪ್ಪಾಗಿದ್ರೆ ಬಣ್ಣದ ಉಡಿಸ್ಯೇನು
ಪಟ್ಟೆಯ ಕುಬುಸ ತೊಡಿಸ್ಯೇನು

ಎಂದರು ತಂದೆ, ಮಗನ ಹಾದಿಯಲ್ಲೆ ನಡೆದು ಅನಂತರ ಆತನನ್ನು ಸರಿಯಾದ ಮಾರ್ಗಕ್ಕೆ ಕೊಂಡು ತರಬಹುದೆಂದು........ಉಟ್ಟ ಬಣ್ಣವನ್ನೂ ನುಂಗಿದರೆ ದೇಹದ ಮಸಿ, ತೊಟ್ಟ ಪಟ್ಟೆಗೂ ಕುರೂಪ ಸೊಂಕಿದರೆ, ಎಂದು ಕೊಂಕು ನುಡಿದ ವೀರಭದ್ರ. ತಂದೆ ಮತ್ತೆ ಹೇಳಿದರು:

ಕಾಳಿ ಕಪ್ಪಾಗಿದ್ರೆ ಆಭರಣ ತೊಡಿಸ್ಯೇನು
ನೂರೆಂಟು ವರದ ಚಿನ್ನವ
ನೂರೆಂಟು ವರದ ಚಿನ್ನವನಿಕ್ಕೇನು
ಆಗ ಹೆಂಡತಿಯ ಮೊಗ ನೋಡು

ಪಟ್ಟೆಯನ್ನುಟ್ಟು ಹೊಳೆಹೊಳೆಯುವ ಆಭರಣಗಳಿಂದ ಅಲಂಕೃತಳಾಗಿ ನಿನ್ನೆದುರು ಬಂದು ನಿಂತರೆ ಮರುಮಾತಿಲ್ಲದೆ ಆಕೆಯನ್ನು ಮೆಚ್ಚಿಕೊಳ್ಳುತ್ತೀಯೆ; ಎಷ್ಟಾದರೂ ಹೆಣ್ಣಿನ ಚೆಲುವು!—ಎಂದರು....ಒಮ್ಮೆ ಚೆಲುವೆಯಲ್ಲವೆಂದರೂ ಮದುವೆಯಾದ ಹೆಣ್ಣನ್ನು ಮನೆಬಿಟ್ಟು ಓಡಿಸುವುದು ಸರಿಯಲ್ಲ. ಮನೆತನದಲ್ಲಿ ಹಿಂದೆಲ್ಲಿಯೂ ನಡೆದುದಿಲ್ಲ. ಮನೆಗೆ ಬಂದ ಮುಗ್ಧೆಯನ್ನು ತನಗೆ ತಕ್ಕವಳಾಗಿ ಮಾಡಿಕೊಂಡು ಲೋಕಕ್ಕೆ ಆದರ್ಶವಾಗಿ ಬಾಳಬೇಕು–ಮುಂತಾಗಿ ಬುದ್ಧಿಹೇಳಿದರು....ಏನೂ ಪ್ರಯೋಜನವಾಗಲಿಲ್ಲ. ಪ್ರಾಯಬಂದವ, ಇಷ್ಟೆಲ್ಲ ತಿಳಿದವ ಹೀಗೆ ಹಾಳು ಹಟಹಿಡಿದು ಕುಳಿತುದುದನ್ನು ಕಂಡು ಅವರಿಗೆ ರೇಗಿತ್ತು. ಮತ್ತೆ ಮಾತನಾಡದೆ ಎದ್ದು ನಡೆದರು. ವೀರಭದ್ರನಾದರೂ ತನ್ನ ಹಟವನ್ನು ಸಡಲಿಸಲಿಲ್ಲ. ತಂದೆ ಕೋಪದಿಂದ ಉರಿದರೆ ಬಿಸಿ ರಕ್ತದ ತಾನೇನು ಕಡಿಮೆ?....

....ಮನೆಯ ಇತರರು ಮನೆಯ ಆಪ್ತರು ಎಲ್ಲ ಅಲ್ಲಿ ಬಂದು ಕೂಡಿದರು. ವೀರಭದ್ರನಿಗೆ ಪರಿಪರಿಯಾಗಿ ಬೋಧಿಸಿದರು.

ಯಾರ್‍ಯಾರು ಹೇಳಿದರು ಕೇಳಲಿಲ್ಲ ಈರಯ್ಯ

ವೀರಭದ್ರ ಯಾರ ಮಾತಿಗೂ ಒಪ್ಪಲಿಲ್ಲ. ಎಲ್ಲರ ಮಾತನ್ನೂ ಕೇಳಿದ. ಎಲ್ಲರೂ ಮಡದಿಯ ಪರವಾಗಿ, ಆ ಕುರೂಪದ ಕಾಳಿಯ ಪರವಾಗಿ ವಾದಿಸುವವರೆ. ಆಕೆಗೆ ತೊಂದರೆ ಆಗಬಾರದು ಎನ್ನುವ ಜನ ತನ್ನ ಸುಖದ ಬಗೆಗೆ ಯೋಚಿಸುವುದೇ ಇಲ್ಲ. ಎಲ್ಲರಿಗೂ ತನಗಿಂತ ಕಾಳಿಯೇ ಹೆಚ್ಚಿನವಳಾದಳು. ಒಳ್ಳೆಯದು. ಈ ಮನೆಯಲ್ಲಿ ಆಕೆಯೇ ಸ್ಥಿರವಾಗಿರಲಿ—ಎಂದು ಯೋಚಿಸಿದ ವೀರಭದ್ರ. ಕುಳಿತಲ್ಲಿಂದ ಜಗ್ಗನೆ ಎದ್ದು ಉರಿಯುವ ಮುಖದಿಂದ ದೃಢವಾಣಿಯಲ್ಲಿ ಹೇಳಿದ:

ಹೋಗತೇನೆ ನಾನು ವನದೇಶ

ಇಷ್ಟು ಹೇಳಿ ಮನೆಯ ಹೊಸಿಲತ್ತ ಹೊರಟೇಬಿಟ್ಟ.

....ಇಷ್ಟು ಹೊತ್ತು ನಡೆದ ಎಲ್ಲ ವಿಷಯಗಳನ್ನೂ ಬಾಗಿಲಾಚೆ ನಿಂತಿದ್ದ ಭದ್ರಕಾಳಿ ಅರಿತುಕೊಂಡಳು. ಗಂಡನ ಅಸಂಸ್ಕೃತವಾದ ಒರಟು ಹಟ ಆಕೆಯನ್ನು ಬೇಸರಗೊಳಿಸಿತು, ರೇಗಿಸಿತು. ಕೋಪ ಬಂದರೆ ಕೇಳಬೇಕೆ, ಮಹಾಕಾಳಿ ಆಕೆ! ಗಂಡನ ಹಿಂದೆಯೇ ಬಿರಬಿರನೆ ಓಡಿದಳು. ಅಷ್ಟರಲ್ಲಿ ವೀರಭದ್ರ,

ಹೋಗತೇನೆ ನಾನು ವನದೇಶ ಎಂದ್ಹೇಳಿ
ಗಕ್ಕನೊಂದಗಸೆ ಇಳಿದನು

ಮೆಟ್ಟಲಿಳಿಯುತ್ತಿದ್ದಂತೆಯೇ ಭದ್ರಕಾಳಿ ಅವನನ್ನು ಸಮಾಪಿಸಿದಳು.

ಗಕ್ಕನೊಂದಗಸೆ ಇಳಿದನು ಭದ್ರಕಾಳಿ
ಮುತ್ತಿನ ಸೆರೆಗ ಹಿಡಿದಳು

ಅವನ ಮುತ್ತು ಪೋಣಿಸಿದ ಉತ್ತರೀಯದ ಸೆರಗನ್ನು ಹಿಡಿದು ನಿಲ್ಲಿಸಿದಳು. ವೀರಭದ್ರ ಹಿಂದೆ ತಿರುಗಿದ.... —ಅಬ್ಬ! ರುದ್ರಕಾಳಿ! ಆಕೆಯ ಮುಖವನ್ನು ನೋಡಿ ನಡುಗಿದ. ಅದೆಂತಹ ಜ್ವಾಲೆ!....ಹಣೆಗಣ್ಣು ತೆರೆದ ಪ್ರಲಯರುದ್ರನನ್ನು ಕಂಡರೂ ಇಷ್ಟು ಭೀತಿಯಾಗುತ್ತಿರಲಿಲ್ಲ....ಭದ್ರಕಾಳಿ ತಡಮಾಡಲಿಲ್ಲ:

ಮುತ್ತಿನ ಸೆರಗ ಹಿಡಿದು ಶಪಿಸ್ಯಾಳಾಗ
ಕಲಸೆ ದೇಗುಲಕೆ ಕದನಾಗು

—ಆ ಕೋಪದ ವೇಳೆಯಲ್ಲಿ ಆಕೆಗೆ ಅದೇನು ನೆನಪು ಬಂದಿತೋ. ಮರ್ತ್ಯದ ಮಡಿಲಿನಲ್ಲಿ, ವೀರಭದ್ರನ ತಂಪೆಯಾದ ಮಲ್ಲಿಕಾರ್ಜುನನ ದೇಗುಲವೊಂ

ದುಂಟು; ತಂದೆಯ ಎದುರು ಅವಿನಯದಿಂದ ವರ್ತಿಸಿದವ ತಂದೆಯ ದೇಗುಲದ ಎದುರು ಕದವಾಗಿ ಕಲ್ಲಾಗಿ ನಿಂತಿರು ಎಂದು ಶಪಿಸಿದಳು. ರೌದ್ರರಸದ ಅಧಿದೇವತೆಯಾದ ಆಕೆಯ ಶಾಪವೆರಗಿ, ವೀರಭದ್ರ 'ಕಲಸೆ'ಯಲ್ಲಿನ ತನ್ನ ತಂದೆಯ ದೇಗುಲದಲ್ಲಿ ಕದವಾಗಿ ನಿಂತನು.

....ಕುಶಲಶಿಲ್ಪಿಯೊಬ್ಬನ ಹಸ್ತಕೌಶಲದಿಂದ ಮೂಡಿ, ಈ ಚತುರ ಜಾನಪದಕವಿಯ ಕಲ್ಪನಾವಿಲಾಸದ ಮೆಯ್‌ಸೋಂಕಿನಿಂದ ಪುಳಕಿತವಾಗಿ, ಇಂದಿಗೂ ಮಲ್ಲಿಕಾರ್ಜುನದೇವನ ಕಣ್ಣೆದುರಿನಲ್ಲೆ ನಿಂತಿದೆ ಆ ಕದ!

---

# ೭. ತವರ ಹಂಗ್ಹರಿದು ಬರತೇವಿ

ಶಿವಕಥಾಶ್ರವಣದಿಂದ ಪ್ರೇಮಮಯರಾದೆವು, ಪುನೀತರಾದೆವು. ಶಿವನ ಪಾದದಲ್ಲಿ ಜೀವ ಒತ್ತೆಯಿಟ್ಟು ಅವನ ನೆನಪಿನ ಬೆಂಕಿಯಲ್ಲಿ ಭವದ ನೂರನ್ನು ನಗುನಗುತ್ತ ಉರಿಸಿ ಹಗುರವಾಗುವ ಭಾಗ್ಯ ನಮಗೆಲ್ಲ ಬರಲಿ.

ಅಂಥ ಭಾಗ್ಯ ಪಡೆದ ನಮ್ಮ ಜನ ತುಂಬುಬಾಳು ಬಾಳಿದರು. ಬಂಗಾರದ ನಾಡು ಕಟ್ಟಿದರು. ನೇರ ಒಳಕ್ಕೆ ಧುಮುಕಿಯೂ ಭವಸಾಗರವನ್ನು ಆಟ್ಟವೆಂಬಂತೆ ಈಸಿಬಿಟ್ಟರು. ಧೈರ್ಯದಿಂದ ಬಾಳಿ ಕಾಲ ಬಂದಿತೆಂದಾಗ ಅಳುಕಿಲ್ಲದೆ ತುದಿಬೆರಳಿನಲ್ಲಿ ಮರ್ತ್ಯವನ್ನು ಮೀಟಿ ಹಂಗು ಹರಿದು ಚಿಗಿದುಬಿಟ್ಟರು. ಶರಣರೆಂಬುದಕ್ಕೆ ಮರಣವನ್ನೆ ಸಾಕ್ಷಿಯಾಗಿಟ್ಟು ನಡೆದರು. ಸಾವಿನ ಹಣತೆಯಲ್ಲಿ ಅವರು ಉರಿಸಿಟ್ಟು ನಡೆದ ದಿಟ್ಟತನದ ದೀಪ ಎಂದೆಂದಿಗೂ ಸಾಲುಸರಗಟ್ಟಿ ಕಂಗೊಳಿಸುತ್ತದೆ.

ದೀಪ ನೀಡುವ ಜನ ಆ ದೀಪವನ್ನು ಕುರಿತು ಹಾಡುತ್ತಾರೆ:

ಮೂರು ಸಂಜೆಗೆ ಮುಂಚೆ ಊರ ದೇವರ ಗುಡಿಲಿ
ನೂರೆಂಟು ದೀಪ ಹಚ್ಚಿಟ್ಟು
ಊರುಮನೆಯ ಹಂಗು ಹರಿದಳು ಮಾಸ್ತ್ಯಮ್ಮ
ಊರುಳಿದು ದೂರ ನಡೆದಳು

—ಇಂದು ನೆನ್ನೆಯ ಮಾತಲ್ಲ, ಸುಮಾರು ಮುನ್ನೂರು ವರ್ಷಗಳ ಹಿಂದಿನ ಮಾತು: ಇಕ್ಕೇರಿಯ ಅಘೋರೇಶ್ವರನ ಪಾದದ ಹೆಸರಿನಲ್ಲಿ ಕನ್ನಡ ತನ್ನ ನಾಡು ಕಟ್ಟಿಕೊಂಡು ಅರಳಿದ್ದ ಕಾಲ ಅದು. ಅಂಥ ನಾಡಿನಲ್ಲಿ ಒಂದು ಸಂಪದ್ಭರಿತವಾದ ಸುಂದರ ಗ್ರಾಮ. ಊರ ಮೊದಲಲ್ಲೆ ಜೀವದ ಉಸಿರು ಹಸಿರುದುಂಬಿದ ತೋಟಗದ್ದೆಗಳು; ಮುಂದೆ ಮನೆ ತುಂಬಿದ ಸಾಲು ಬೀದಿಗಳು; ಅವೆಲ್ಲ ಕೂಡುವ ಕೊನೆಯಲ್ಲಿ ಒಂದು ಗುಡಿ; ಗುಡಿಯಾಚೆ ಹೆಗ್ಗಾಡಿನ ಸೆರಗು ಸೋಕಿರುವ ಸಣ್ಣದೊಂದು

ಬಯಲು. ತುಂಬುಬಾಳಿನ ಸೊಗಸು ಎಂಥದೆಂಬುದನ್ನು ಆ ಗ್ರಾಮದಲ್ಲಿ ಕಾಣಬಹುದಿತ್ತು. ದಿನ ತುಂಬ ದುಡಿಮೆ, ಮೆಯ್ ತುಂಬ ಚಟುವಟಿಕೆ, ಮನಸ್ಸು ತುಂಬ ಉಲ್ಲಸ, ಹೀಗೆ ಬಹುಕಾಲ ಬಾಳಿದ ಊರು ಅದು.

ಒಮ್ಮೆ ಬಂಗಾರದಂಥ ಆ ಊರಿಗೂ ಆಪತ್ತು ಬಂದಿತು. ನಾಡಿಗೇ ಕಿಚ್ಚು ಹಬ್ಬಿತೆಂದಾಗ ಅದರೊಳಗಿನ ಒಂದು ಊರಿಗೆ ನೆಮ್ಮದಿ ಇದ್ದೀತೆ? ನಂದಗೋಕುಲದಂತಿದ್ದ ಆ ಊರು ತಿಂಗಳು ಕಾಲ ಶ್ಮಶಾನವಾಗಿಬಿಟ್ಟಿತ್ತು. ಮನೆಯ ಮಸುಕಿನಲ್ಲಿ ಬಿಡುಗಣ್ಣುಗಳ :ಬೆದರುಬೆಳಕಿನಲ್ಲಿ ಮುದುಕರು ಹೆಂಗಸರು ಮಕ್ಕಳು ಬದುಕಿದ್ದರೂ ಇದ್ದಂತಿರಲಿಲ್ಲ. ಯಾವ ಕ್ಷಣದಲ್ಲಿ ಎಲ್ಲಿನ ಮುಗಿಲು ಕಳಚಿ ಏನು ಸುದ್ದಿ ಬಂದೀತೋ ಎಂದು ಅರೆಸತ್ತ ಮೆಯ್ಯಿನ ಜೀವ ತುಂಬಿದ ಕಿವಿಗಳು ತವಕಗೊಂಡಿದ್ದವು.........ತಿಂಗಳು ಕಳೆದು ಸುದ್ದಿ ಬಂದಾಗ ಮಾತ್ರ ಯಾವ ಮುಗಿಲೂ ಕಳಚಿರಲಿಲ್ಲ. ನಾಡು ಬದುಕಿದ್ದಿತು. ಮರಳಿ ಊರು ತುಂಬಿತು. ಆದರೆ ಹರ್ಷವನ್ನೆ ಮನೆ ದುಂಬಿಸಬೇಕಾಗಿದ್ದ ಆ ಜನ ಜೊತೆಗೊಂದು ಅಳಲನ್ನೂ ಹೊತ್ತು ಭಾರ ಗೊಂಡು ಬಂದಿದ್ದರು. ನಾಡನ್ನೆ ನಡೆಸಿದ ಊರಿನ ಹರಯದ ಗಂಡು ಆ ಕಿಚ್ಚಿಗೆ ಬಲಿಯಾಗಿ ಹೋಗಿದ್ದ.........ಮುಗಿಲು ಕಳಚಲಿಲ್ಲವೆಂದು ಸಮಾಧಾನಗೊಂಡ ಜನ ತಮ್ಮ ಊರಿನ ಒಂದು ಮನೆಯ ಮಾಡು ಕಳಚಿ ದುದಕ್ಕಾಗಿ ವ್ಯಥೆಪಟ್ಟರು.........

ಅದಾಗಿ ಮೂರು ತಿಂಗಳು ಕಳೆದವು. ಊರು ಚೇತರಿಸಿಕೊಂಡಿತು. ಆದರೆ ಹರಯದ ಗಂಡನ್ನು ಕಳಿಸಿಕೊಟ್ಟ ಆ ಮನೆ ಮಾತ್ರ ಮತ್ತೆ ದೀಪ ಉರಿಸಲಿಲ್ಲ.

ಮತ್ತೆ ಮೂರು ತಿಂಗಳು ಕಳೆದವು.........ಆರು ತಿಂಗಳು ಕಳೆದ ಮೇಲೆ ಇಂಥದೊಂದು ದುರ್ದಿನ ಬಂದು ಊರೆಲ್ಲ ಹೊಗೆ ತುಂಬಿ ನರಳೀ ತೆಂದು ಯಾರು ಎಣಿಸಿದ್ದರು? ನಾಡಿನ ಕಿಚ್ಚು ಮರೆಯುವ ವೇಳೆಗೆ ಮಡಿಲಲ್ಲೆ ಕಿಚ್ಚು ಉರಿಯತೊಡಗಿತ್ತು.

ಆ ದುರ್ದಿನದ ಮುಚ್ಚಂಜೆಯಲ್ಲಿ ತಮ್ಮ ಊರಿನ ಹರೆಯದ ಹೆಣ್ಣು ಮಗಳು–ನಾಡನ್ನೆ ನಡೆಸಿದ ತಮ್ಮ ವೀರ ತರುಣನ ಮಡದಿ–ಗುಡಿಯಲ್ಲಿ ನೂರೆಂಟು ದೀಪ ಹೊತ್ತಿಸಿ, ಮಾದು ಬರುತ್ತಿದ್ದ ತಮ್ಮ ಎದೆಯ ಅಳಲನ್ನು

ಒಮ್ಮೆಲೇ ಭುಗ್ಗನುರಿಸಿ, ಊರಾಚೆಯ ಬಯಲಿನತ್ತ ಹೊರಟುಬಿಟ್ಟಿದ್ದಳು. ಆ ಬಯಲಿನಲ್ಲೋ—

ಊರ ಹೊರಗಣ ಅರಳಿ ಉಂಗುರಗಟ್ಟಿಯಾಗೆ
ಉರಿಯೆದ್ದು ಬಾನಿನೆತ್ತರ
ಉರುಳ್ಯಾವು ಕೆಂಟೆ ಕೊರಡೆಲ್ಲ ಚಟಗುಟ್ಟಿ
ಊರುಳಿದು ಮಾಸ್ತ್ಯಮ್ಮ ನಡೆದಳು

ಕೆಂಪು ಕೆರಳಿದ ಸಂಜೆ ಮೊದಲೇ ಭಯಂಕರವಾಗಿರಲು ಅದನ್ನು ಇನ್ನಷ್ಟು ಉಗ್ರಗೊಳಿಸಿದೆ ಈ ದೆವ್ವಗಿಚ್ಚು. ನಿರ್ಭಯಳಾಗಿ ಅತ್ತ ಸಾಗುತ್ತಿದ್ದಾಳೆ. ಈ ಹೆಣ್ಣುಮಗಳು.........ಅದೇನು ಸಾಮಾನ್ಯವಾದ ಕಿಚ್ಚೆ ?

ಅಡವಿಯ ಗಿಡಮರ ಎಲೆ ಸುಟ್ಟು ಹೆಣೆ ಸುಟ್ಟು
ಆಕಾಶದ ತುಂಬ ತೂರ್ಯಾವು
ಆರು ಹರಿದಾರಿ ದೂರ ಹೊಗೆ ಹಬ್ಬಿ ಹರಿದಾವು
ಊರುಳಿದು ಮಾಸ್ತ್ಯಮ್ಮ ನಡೆದಳು

ಎವೆಯಿಕ್ಕುವುದರೊಳಗೆ ನೆತ್ತರು ಚಿಮ್ಮಿ ರುಂಡವುರುಳುವ ಕಾಳೆಗದ ಕಣ, ಆ ಉತ್ಸಾಹದ ಅಮಲಿನಲ್ಲಿ, ಸಹ್ಯವೇ ಆದೀತು. ಆದರೆ, ಒಬ್ಬರನ್ನು ಆಹುತಿಗೊಂಡರೆ ಸಾಕೆಂದು ಭೋರ್ಗುಡುವ ಈ ಮುಗಿಲು ನೆಕ್ಕುವ ಬೆಂಕಿ ಅದೆಷ್ಟು ಕ್ರೂರ. ಎಂಥ ಕೋಲಾಹಲವೆಬ್ಬಿಸಿಬಿಟ್ಟಿದೆ.

ಹಕ್ಕಿ ಚೀರಾಡ್ಯಾವು ದಿಕ್ಕೆಲ್ಲ ಹಾರ್ಯಾವು
ಮಕ್ಕಳುಗೂಡಿ ಮರಿಗೂಡಿ
ಉಕ್ಕುಗಡಲಿನ್ಹಂಗೆ ಊರೇ ನೆರೆದಾವು
ಊರುಳಿದು ಮಾಸ್ತ್ಯಮ್ಮ ನಡೆದಳು

ನೆಲದ ಕೋಲಾಹಲ ಮುಗಿಲಿನ ಚೀತ್ಕಾರಕ್ಕೆ ಮರುದನಿಗೊಡುವಂತೆ ಹೊಳಲಿಡುತ್ತಿದೆ; ರಾಕ್ಷಸನ ಕುಣಿತಕ್ಕೆ ರಣಚಂಡೆ ಹೊಡೆದಂತಿದೆ. ಇಂಥ ಕೋಲಾಹಲವಿದ್ದರೂ ಆಕೆಯೇನು ಉದಾಸೀನಳಾಗಿದ್ದಳೋ ವಿಸ್ಮೃತಳಾಗಿದ್ದಳೋ ದೆವ್ವ ಮೆಯ್ಯುಂಡವಳಾಗಿದ್ದಳೋ ಇಂದ್ರಿಯಳೆಲ್ಲ ಸತ್ತು ಉರಿಯುವ ಪ್ರಾಣಮಾತ್ರಳಾಗಿದ್ದಳೋ ನಡೆಯುವ ಕಲ್ಲಾಗಿದ್ದಳೋ—ಯಾರು ಬಲ್ಲರು? ಹೆಜ್ಜೆದಪ್ಪದೆ ನೇರ ನಡೆಯುತ್ತಿದ್ದಳು ದೃಢವಾಗಿ, ಸಾವಕಾಶವಾಗಿ. ಹಾಗಿದ್ದರೂ ಕಾಲುಗಳು ಭೂಮಿ ಬಿಟ್ಟಂತೆ ತೇಲುತ್ತಿದ್ದವು.

ಕಣ್ಣುಗಳು ಚೂಪುಗೊಂಡು ಮುಗಿಲಲ್ಲಿ ನಟ್ಟಿದ್ದವು ; ಅದೇನು ಅಲ್ಲಿ ಕರಗಿ ಹೋಗಿದ್ದವೊ ಇಲ್ಲ ಕುಡಿಯೊಡೆಯುತ್ತಿದ್ದವೊ........' ಆಕೆ ಮುಗಿಲೆತ್ತರದ ಅಗ್ನಿಜ್ವಾಲೆಯನ್ನು ಸವಿನಾಪಿಸಿ ನಿಂತಿದ್ದಳು, ಈಗ ಮಾತ್ರ ಅದೇ ಬೆಂಕಿಯಲ್ಲಿ ಮಿಂದು ಬಂದಳೋ ಎನ್ನುವಂತೆ....ಅಗ್ನಿಯ ಹೆಗಲೇರಿ ನರ್ತಿಸುವ ಸ್ವಾಹಾದೇವಿಯರು ಆಕೆಯ ತೆರವುಗಣ್ಣುಗಳಲ್ಲಿ ಪ್ರತಿಬಿಂಬಿಸಿದ್ದರು .... ಸುತ್ತಣ ಕೋಲಾಹಲ ಅಡಗುತ್ತಿತ್ತು ; ನೀರಿನ ಆಳದಲ್ಲಿ ಉಸಿರುಕಟ್ಟಿ ನಿಂತಂತಿದ್ದರು ಜನ....ಇಷ್ಟುಹೊತ್ತು ಆಕೆ ತನ್ನೆಲ್ಲವನ್ನೂ ಸುರಿದ ಬರಿಗೊಡವಾಗಿದ್ದಳು. ಈಗ, ಸುತ್ತಣ ನೀರವತೆಯ ಗಭೀರ ಒತ್ತಡದಿಂದ ಮತ್ತೆ ಹಳೆಯದೆಲ್ಲ ಜೀವದುಂಬುತ್ತಿದ್ದಂತೆ ತೋರುತ್ತಿತ್ತು ; ಕರಿಕಲು ಚಿತ್ತ ಕೊನರತೊಡಗಿತ್ತು. ಹಾಗೆ ಕೊನರಿ ಕುಡಿ ಕುಡಿ ಮಿಡಿಯುವ ಚಿತ್ತವನ್ನು ಆಕೆ ಕಣ್ಣೆದುರಿನ ಬಳ್ಳಿಯೆಂಬಂತೆ ನೋಡುತ್ತಿದ್ದಳು........—ಇದೊಂದು ಅಪೂರ್ವ ಅನುಭವ. ಬಳ್ಳಿಮುಚ್ಚಿದ ಚಪ್ಪರವಾಗಿದ್ದವಳು ಈಗ ಬಳ್ಳಿಯೆಲ್ಲವನ್ನೂ ಬಿಡಿಸಿ ಬಿಡಿಸಿ ನೆಲಕ್ಕೆ ಚೆಲ್ಲಿದ್ದಳು. ಈಗ ತನಗೆ ತಾನೇ ಬೇರೆಯವಳಾಗಿ ಕಾಣುತ್ತಿದ್ದಳು, ಹೊಸಬಳಾಗಿ ಕಾಣುತ್ತಿದ್ದಳು....—ಹಳ್ಳಿಯ ಹತ್ತು ಹೆಣ್ಣುಗಳಲ್ಲಿ ಒಬ್ಬಳಾಗಿ ಎಲ್ಲರಂತೆಯೇ ಬಾಳಿನಲ್ಲಿ ಬೆರೆತು ದಿನಗಳನ್ನು ದಾಟಿದ್ದಳು. ಈಗಲೋ–ಮಂತ್ರದ ಮಾವಿನಂತೆ ಕ್ಷಣದಲ್ಲಿ ಹೆಮ್ಮರವಾಗಿ ಬೆಳೆದುಬಿಟ್ಟಿದ್ದಾಳೆ. ನೀರಗಣ್ಣಿನಲ್ಲಿ ನೆಲ ಹೊಲ ಬಾನುಗಳನ್ನು ಕಂಡಿದ್ದಳು, ಕಷ್ಟಸುಖಗಳನ್ನು ಉಂಡಿದ್ದಳು, ನೀತಿ ನಡತೆಗಳನ್ನು ಅರಿತುಕೊಂಡಿದ್ದಳು....—ಈಗ ತನ್ನನ್ನೆ ತಾನು ಕಾಣುತ್ತಿದ್ದಾಳೆ........ಹತ್ತು ಜನಗಳಲ್ಲಿ ಹನ್ನೊಂದನೆಯವಳಾಗಿ ಕಷ್ಟವೋ ಸುಖವೋ ನೆಮ್ಮದಿಯಾಗಿ ಬಾಳಿದ ಹಳ್ಳಿಯ ಹೆಣ್ಣು, ಅವಳೊಬ್ಬಳು ; ಯುಗಯುಗಗಳ ಹೆಣ್ಣಿನ ಹಂಬಲವೆಲ್ಲ ಕೂಡಿ ಮೆಯ್ ಹೊಳಲಿಟ್ಟು ಕ್ಷಣದಲ್ಲಿ ತನ್ನನ್ನು ಬೃಹದಾಕಾರ ಬೆಳೆಸಿರಲು ಮೂಡಿಬಂದ ವೀರಪತ್ನಿ, ಅವಳಿನ್ನೊಬ್ಬಳು ; ಅವರಿಬ್ಬರನ್ನೂ ಬೇರೆ ಬೇರೆಯಾಗಿ ಸ್ಪಷ್ಟವಾಗಿ ಕಾಣಬಲ್ಲ ಅಳೆಯಬಲ್ಲ ತಾನು, ಮೂರನೆಯವಳು ........ಮೂರನೆಯವಳಾದ ತಾನು ಎಲ್ಲ ಅನುಭವಿಸಬಲ್ಲಳು, ಎಲ್ಲ ಅನುಭವಿಸಿಯೂ ಏನೊಂದೂ ಅನುಭವಿಸದಂತೆ ನಿರಾಳವಾಗಿರಬಲ್ಲವಳು, ಬರಿಗೊಡವಾಗಬಲ್ಲವಳು....—ಇಂಥದೊಂದು ಅನುಭವವೇ ಇರಬೇಕು ತನ್ನನ್ನು

ಅಗ್ನಿಗೆ ಅರ್ಪಿಸಿಕೊಳ್ಳಲು ಪ್ರೇರಿಸಿದ್ದುದು. ಹೀಗೆ ತನ್ನೆಲ್ಲ ಬರಿದಾಗದೆ ಮನುಷ್ಯ ತಾನಾಗಿಯೇ ತನ್ನ ಬಾಳನ್ನು ಮುಗಿಸಿಕೊಳ್ಳುವುದು ಹೇಗೆ? ಅಂಥವನು ಇಲ್ಲ ಸಾವಿಗೆ ಹೆದರಿ ಬದಕುತ್ತಾನೆ, ಇಲ್ಲ ಬದುಕಿಗೆ ಹೆದರಿ ಸಾಯುತ್ತಾನೆ, ಆತ್ಮಹತ್ಯೆಮಾಡಿಕೊಳ್ಳುತ್ತಾನೆ...ತನ್ನಂಥ ಅಲ್ಪಬುದ್ಧಿಯ ಸಾಮಾನ್ಯ ಹೆಣ್ಣಿನಲ್ಲಿ ಎಂಥ ಜ್ಞಾನ........ಆಶ್ಚರ್ಯದ ಮಾತಲ್ಲ ಅದು. ತನ್ನನ್ನು ಬರಿದು ಮಾಡಿಕೊಂಡಮೇಲೆ ಜ್ಞಾನವಲ್ಲದೆ ಇನ್ನೇನು ಬೆಳಗೀತು ಅಲ್ಲಿ?........

—ಜೀವದೊಡನೆ ಲೀನಗೊಂಡಿದ್ದ ಅನುಭವಗಳನ್ನು ಅವುಗಳ ಬಣ್ಣಗೂಡ ಸಿಕ್ಕುಬಿಡಿಸಿ ಹೊರಸೆಳೆದಿದ್ದಳು ಆಕೆ........ಬಣ್ಣವಿಲ್ಲದ ಜೀವ ಈಗ ಆ ಅನುಭವಗಳ ರಾಗವೈಭವವನ್ನು ಪ್ರತ್ಯಕ್ಷ ಕಾಣುತ್ತಿತ್ತು. ಈಗ ತನ್ನ ಕತೆಯನ್ನು ತಾನೇ ಹೇಳಿಕೊಳ್ಳಬಲ್ಲವಳಾಗಿದ್ದಳು ಆಕೆ.

ಏಳು ತಿಂಗಳ ಹಿಂದಿನ ಮಾತು:

ದಂಡು ಬಂದವು ದಂಡು ಬಿಳಿಗಿ ಅರಸರ ದಂಡು
ಇಕ್ಕೇರಿ ಸೀಮೆ ವ್ಯಾಲೆರಗ್ಯಾವು
ಕಂಡೋರ ಕೊಚ್ಯಾರು ಕ್ವಾಟೆಯ ಸುತ್ತ್ಯಾರು
ಗಂಡಾಗಿ ನೀವು ದಂಡ ಸೇರೀರಿ

—ಬಿಳಿಗಿಯ ಅರಸರಿಗೂ ಇಕ್ಕೇರಿ ಸಂಸ್ಥಾನಕ್ಕೂ ನಡುವಣ ಹಗೆ ಹೊಸದಲ್ಲ. ಅದು ಎಂದಿನಿಂದ ಇದ್ದುದೇ. ಗಡಿಯಲ್ಲಿ ದಿನನಿತ್ಯವೂ ಒಬ್ಬರೊಬ್ಬರ ಪಡೆಗೆ ಸಣ್ಣ ಸಣ್ಣ ಕಾದಾಟ ಕಚ್ಚಾಟ ಇದ್ದದ್ದೆ. ಆದರೆ ಬಿಳಗಿಯಂಥ ಹುಲುನಾಡಿನ ಅರಸು ಇಕ್ಕೇರಿ ಸಂಸ್ಥಾನದ ಮೇಲೆ ಎಷ್ಟು ಆಟ ಆಡಿದರೂ ಅದು ಆನೆಯ ಕೂಡ ಇರುವೆಯ ಆಟ, ಅಷ್ಟೆ. ಹೀಗಿರುವಾಗ ಆತ ಹಲವಾರು ಅರಸರ ದಂಡು ಕೂಡಿ ಒಮ್ಮೆಲೇ ಇಷ್ಟು ಆರ್ಭಟದಿಂದ ಇಕ್ಕೇರಿಯ ಮೇಲೆ ಬಂದು ಎರಗಿಯಾನೆಂದು ಯಾರು ಕಂಡಿದ್ದರು?.... ಎರಗಿದ. ಇಷ್ಟು ದಿನ ಪೆಟ್ಟಿಗೆ ಕಟ್ಟಿ ಒಳಕುಳಿತಿದ್ದ ಆತನ ಷಂಡ ಪೌರುಷ ಈಗ ಹೊಡೆದೆದ್ದಿತ್ತು....... ನಾಡಿನಮೇಲೆ ದಾಳಿಬಂದಾಗ ಆತನ ಪಡೆ ಮಾಡಿದ ಅನಾಚಾರ ಸ್ವಲ್ಪವಲ್ಲ. ಬಡ ಜೋಪಡಿಗಳೆಲ್ಲ ದಂಡಿನ ಕಾಲಡಿಗೆ ಸಿಕ್ಕು ಹುಡಿಯಾಗಿದ್ದವು; ಸಿರಿ ದೋಚಿದ ಊರುಗಳು ಎಚ್ಚರದಪ್ಪಿದಂತಾ

ಗಿದ್ದವು; ತೆನೆಯೆತ್ತಿ ತಲೆದೂಗುತ್ತಿದ್ದ ಚಿನ್ನದ ಪಯಿರು ಬೂದಿಯಾಗಿತ್ತು ........ಹಾದಿಯಲ್ಲಿ ಸಿಕ್ಕಿದ ಜನರನ್ನು ಕುರಿಗಳಂತೆ ಕೊಚ್ಚುತ್ತ ಬಂದಿತ್ತು ದಂಡು; ಹೆಣ್ಣುಮಕ್ಕಳು ಹೇಳಬಾರದ ನರಕಯಾತನೆ ನರಳಿದರು; ಬೆದರಿದ ಜನ ಕಾಡುಪಾಲಾಗಿದ್ದರು........ತನ್ನ ಬಾಳಿನಲ್ಲೆ ಅಂಥ ಕೋಲಾಹಲ ಕಂಡಿರಲಿಲ್ಲ ಆ ನಾಡು. ಹಿಂದು ಮುಂದು ತಿಳಿಯದಾಗ ಒಂದೇ ಬಾಗಿಗೆ ದಂಡು ಬಂದು ಎರಗಿರಲು ಇರುಳಿನಲ್ಲಿ ನೆಮ್ಮದಿಯಾಗಿ ನಿದ್ರಿಸುತ್ತಿದ್ದ ಗುಬ್ಬಿಗಳ ತುಂಬುಗೂಡಿಗೆ ಕಿಚ್ಚಿಟ್ಟದಂತಾಗಿತ್ತು........ಆದರೂ ಅರಸರು ಬೆದರಲಿಲ್ಲ. ನಾಡನ್ನು ಕಾಪಾಡಲು ಏನೆಲ್ಲ ಬೇಕೋ ಒಡನೆಯೇ ಮಾಡಿದರು. ಕೋಟೆಯನ್ನು ಭದ್ರಗೊಳಿಸಿದರು; ಪಡೆಯನ್ನು ಬಲಗೊಳಿಸಿದರು.......... ದಂಡಿಗೆ ಸೇರಬಲ್ಲ ಜನ ಬರುವುದೆಂದು ಡಂಗುರ ಹೊಡೆಸಿದಾಗ ತಮಗೆ ಮೊತ್ತಮೊದಲು ಕಾಳೆಗದ ಕಾವು ಸೋಕಿದ್ದಿತು........—ಆ ಮರುದಿನವೇ ಊರಿನ ಹರೆಯದ ಗಂಡುಗಳೆಲ್ಲ ಎದೆಯುಬ್ಬಿಸಿ ದಂಡಿಗೆ ಹೊರಟದ್ದು, ಗುಡಿಯಲ್ಲಿ ಸೇರಿ ಮಂಗಲಾರತಿ ಬೆಳಗಿಸಿ ಊರು ದಾಟಿದ್ದು—ಎಲ್ಲವೂ ಚಕಮಕಿ ಚಿತ್ರವಾಗಿ ಆಕೆಯ ಕಣ್ಣೆದುರು ಹಾಯುತ್ತಿತ್ತು....ದಂಡಿಗೆ ಹೊರಟವರಲ್ಲಿ ತನ್ನ ಪತಿಯೂ ಒಬ್ಬ....ಆತನನ್ನು ಮನೆಯಿಂದ ಕಳಿಸಿಕೊಡುವಾಗಿನ ತನ್ನ—ಹಳ್ಳಿಯ ಗರತಿವೆಣ್ಣಿನ—ಸ್ಥಿತಿ: ಏನೋ ಒಂದು ಬಗೆಯ ಎದೆಯೊತ್ತುವ ಅಳಲು; ನಾಚಿಕೆ ಕಟ್ಟಿ ಮತ್ತೇನೊ ಆಗಿ ಆಡಲು ಬರದ ಆ ಯಾತನೆ ....—ಕಾಳೆಗದ ಚಿಂತೆ ಎಲ್ಲರಿಗೂ ಇದ್ದದ್ದೆ. ಆದರೆ, ತನ್ನಂಥ ಹರೆಯದ ಗಂಡಿನ ಮಡದಿಯರಿಗೂ ತಾನು ಅಳಲಿದ ತೊಳಲು ತಿಳಿದಿತ್ತೋ ಇಲ್ಲವೋ ....ಅಷ್ಟೇಕೆ, ಹೀಗೆಯೆ ಆಗೊಮ್ಮೆ ಈಗೊಮ್ಮೆ ಅವಸರದಲ್ಲಿ ತನ್ನ ಪತಿ ದಂಡಿಗೆ ಹೋಗಿ ಅರಸರ ಮರ್ಯಾದೆ ಸಲ್ಲಿಸಿದ್ದುಂಟು. ಆಗೆಲ್ಲ ತನಗೆ ಎಷ್ಟು ನೋವು ತೋರಿದ್ದರೂ ಇಂಥ ಎದೆ ಹಿಂಡುವ ವಿಚಿತ್ರ ಅಳಲು ಉಕ್ಕಿರಲಿಲ್ಲ........ಮುಂದೆ ಬರಲಿರುವ ಕೆಂಪು, ಹಿಂದೆ ಅಂದಿಗೂ ತನ್ನ ಸೆರಗಿನ ಕುಡಿ ಚೆಲ್ಲಿದ್ದಿತಿರಬೇಕು....—ಅದಾಗಿ ಕೆಲವು ದಿನ ಊರೆಲ್ಲ ಕತ್ತಲು. ಆ ಕತ್ತಲನ್ನು ಎತ್ತಿ ತೋರಿಸುವ ಮಿಂಚಿನಂತೆ ಪಿಸುಮಾತಿನ ಬೆದರುಸುದ್ದಿಗಳು........ಅವುಗಳ ನಡುವೆಯೂ, ಆಚೀಚಿನವರು ಬೆದರುಗಣ್ಣು ಹೊಳೆಸಿ ಮೆಚ್ಚುಗೆ ಸೂಚಿಸಿ ಹಿಮುಗೊರೆತದ ತನ್ನ ಎದೆಯಲ್ಲೂ

ವಿಚಿತ್ರ ಹರ್ಷದ ಬಿಸಿಯನ್ನು ಹೊತ್ತಿಸುವ ಆ ಮಾತುಗಳು : ತನ್ನ ಗಂಡ ದಂಡಿನಲ್ಲಿ ಹೆಸರು ಪಡೆದು ದಂಡಿನ ಸರದಾರನಾಗಿ ಅರಸರ ಮೆಚ್ಚುಗೆ ಪಡೆದ ಸುದ್ದಿಯನ್ನು ಸುರಿದು ಓಡುವ ದನಿಗಳು....—ಆಗ ತಾನು ತನ್ನ ಗಂಡನ ಸಾಹಸವನ್ನು ಊಹಿಸಲೆತ್ನಿಸಿದ್ದಳು ; ಯೋಚಿಸಿ ಯೋಚಿಸಿ ನಿಷ್ಫಲಳಾಗಿ ದಿನ ಸವೆದಿದ್ದಳು........ಅಂಥ ಸಾಹಸಗಳನ್ನೆಲ್ಲ ಈಗ ಆಕೆ ಸಾಕ್ಷಾತ್ತಾಗಿ ಎದುರಲ್ಲೆ ಕಾಣಬಲ್ಲಳು :

ದಂಡ ಸೇರಿರಿ ದಂಡ ಸಂದಾರರಾದೀರಿ
ಪುಂಡರ ಕಡಿದು ನಡೆದೀರಿ

........ಈಗ ಹೇಗೋ, ಆಗಂತೂ ಆಕೆಗೆ ಎಲ್ಲಕ್ಕಿಂತ ಸತ್ಯವಾಗಿ ತೋರಿದ್ದು 'ನಡೆದಿರಿ' ಎಂಬುದು....—ಈಗ ಮತ್ತೆ ಅದನ್ನೆ ಆಕೆ ಯೋಚಿಸುತ್ತಾಳೆ. ನಡೆಯುವುದಂತೂ ಇದ್ದದ್ದೆ. ಆದರೆ ಗಂಡಾಗಿಯೇ ನಡೆಯಬೇಕೆಂದರೆ ಅದರ ಹಾದಿ ಬೇರೆ.

ಗುಂಡು ಹಾದೀನ್ಹಿಡಿದು ಗಂಡು ಸರದಾರ ನೀವು
ಗಂಡು ಹೆಜ್ಜಿಲಿ ಮುರುತ್ಯ ತುಳಿದೀರಿ

ಗಂಡಿನ ಹಾದಿ ನೇರವಲ್ಲ—ಬಳಸು ಹಾದಿ, ಗುಂಡಣೆಯ ಹಾದಿ. ಹಾಗೆಯೇ ಸಿಡಿಗುಂಡುಗಳು ಮಳೆಗರೆಯುವ ಹಾದಿ........ಹೆಸರಿಗೆ ಜೊಲ್ಲು ಸುರಿಸಿ ಅಂಥ ಹಾದಿಯಲ್ಲಿ ನಾನೂ ನಡೆದೇನೆಂದು ಹೊರಡುವವರು ಅನೇಕರು. ಆದರೆ ಅವರ ನಡಗೆಯೆಲ್ಲಿ ಇವರ ನಡಗೆಯೆಲ್ಲಿ? ಇವರ ನಡಗೆ ಮರ್ತ್ಯವನ್ನು ತುದಿ ಬೆರಳಲ್ಲಿ ಮೀಟಿ ಮೇಲಕ್ಕೆ ಚಿಮ್ಮುವ ನಡಗೆ; ನೆಲಕ್ಕಿಡುವಾಗ ಆನೆತೂಕದ ಹೆಜ್ಜೆ, ಒಡನೆಯೇ ಚಿಮ್ಮುವಾಗ ಎಸೆ ಮಿಟುಕಿಸುವಂಥ ಹಗುರ ಮಿಾಟು! ........

—ನಾಡಿನಲ್ಲಿ ಕಾಳಗದ ಕಿಚ್ಚು ಹೊತ್ತಿ ತಿಂಗಳು ಕಳೆದಿದ್ದವು........ ಒಂದು ದಿನ ಮುಚ್ಚಂಜೆಯಲ್ಲಿ ಊರಿನ ಮನೆಮನೆಗಳ ಮುಸುಕನ್ನು ಹರಿಸಿ ಸುದ್ದಿ ಹಬ್ಬಿತ್ತು, ಕಾಳೆಗದಲ್ಲಿ ನಾಡಿಗೆ ಗೆಲುವಾಯಿತೆಂದು, ದಂಡಿಗೆಹೋದ ಊರಿನ ಜನ ಹಿಂದಿರುಗಿ ಬಂದಿರುವರೆಂದು....—ಹಾಗೆ ಬಂದವರೆಲ್ಲ ಗುಡಿಯ ಮುಂದೆ ಸಾಲುಗಟ್ಟಿದ್ದರು. ಸುದ್ದಿ ಕೇಳಿದ ಊರಿನವರು ಅತ್ತ ಧಾವಿಸಿದ್ದರು........ಅರಸರ ಮೆಚ್ಚು ಉಂಬಳಿಗಳನ್ನು ಹೆಗಲೇರಿಸಿ ತನ್ನ

ಪತಿಯೂ ಬಂದಿರಬೇಕು–ಹಾಗೆ ಊಹಿಸಿದ್ದಳು ತಾನು. ಅದೊಂದು ವಿಲಕ್ಷಣ ಉದ್ವೇಗದಲ್ಲಿ ಧಾವಿಸಿದ್ದಳು. ಆದರೆ,

ದಂಡಿಗ್ಹೋದೋರೆಲ್ಲ ಹಿಂಡಾಗಿ ಮರಳ್ಯಾರು
ಕಂಡೆವು ಊರ ಗುಡಿ ಮುಂದೆ
ಗಂಡು ಸರದಾರ ನೀವು ಬಂದೀರಂತೋಡೇವು
ಬೆಂಡಾಯಿತು ಬಯಕೆ ಚಣದಾಗೆ

—ನಡೆದ ಕಥೆಯನ್ನು ನೆನೆನೆನೆಯುತ್ತ, ಹೊಗೆಯಂತೆ ಹೊರಗೇ ಸುತ್ತುತ್ತಿದ್ದ ವ್ಯಥೆ ಆಕೆಯ ಎದೆಯೊಳಕ್ಕೆ ಇಳಿಯತೊಡಗಿತ್ತು. ಧ್ರುವನ ಕಥೆ ಹೇಳುವೆನೆಂದು ಹೊರಟ ಕವಿ ತೋಲ ತಪ್ಪಿ, ಮನೆಬಿಟ್ಟು ಓಡಿದ ತನ್ನ ಮಗನ ನೆನಪು ಹಿಡಿದು ತೊಳಲುವಂತೆ ಆಗಿದ್ದಿತು ಆಕೆಯ ಸ್ಥಿತಿ........ ಅಂದಿನ ಮುಚ್ಚಂಜೆಯ ದೇಗುಲದ ಉರಿಯನ್ನು ಆಹ್ವಾನಿಸಿ ಆಕರ್ಷಿಸಿಕೊಂಡಂತೇ ಆಗಿತ್ತು :

ಬಸಿರು ಹೊತ್ತ ಬಾಲೆ ಬಸವಳಿದು ಬಿದ್ದಿದ್ದೆ
ಉಸಿರಾಗೆ ಜೀವ ಹೊರಳ್ಯಾವು

—ಅಂಥ ವೇಳೆಯಲ್ಲಿ ಸುದ್ದಿಕೇಳಿ ಕ್ಷಣಕಾಲ ಜೀವ ಉಳಿಯುವುದು ಆಶ್ಚರ್ಯ. ಉಳಿದಿದ್ದಿತು. ಹೊನಲು ಮುಳುಗಿ ಕಡ್ಡಿ ಕಚ್ಚಿದವನಂತೆ ಪ್ರಾಣ ಉಸಿರಿನ ದಾರಹಿಡಿದು ಮಿಡುಕುತ್ತಿತ್ತು....ಆಗ ಮೊತ್ತಮೊದಲಬಾರಿಗೆ, ಈ ಪ್ರಾಣಕ್ಕೂ ತನ್ನ ಪತಿಗೂ ಎಂಥ ಅಂಟುನಂಟು ಇದ್ದಿತೆಂಬುದನ್ನು ಆಕೆ ತಿಳಿಯಬಹುದಿತ್ತು. ಆ ನಂಟಿನಿಂದಲೇ ದೇಹವುಳಿದ ಪ್ರಾಣ, ಆ ನಂಟಿನಿಂದಲೇ ಉಸಿರಿನ ತುದಿ ಹಿಡಿದು ನೇಲುತ್ತಿತ್ತು : ಈ ಪ್ರಾಣ ಹೇಗೋ ಹಾಗೆ, ತನ್ನ ಪತಿ ಮರ್ತ್ಯ ಬಿಟ್ಟರೂ ಒಂದು ಬೆರಳಿನಲ್ಲಿ ತನ್ನ ಬಸಿರನ್ನು ಕಚ್ಚಿ ಹಿಡಿದಿದ್ದ........ತಾಸು ತಾಸು ಕಳೆದು ದೇಹದಿಂದ ವಿಸ್ಮೃತಿ ಜಾರುತ್ತಿದ್ದಾಗ, ಆಗ ಯೋಚಿಸಿದ್ದಳು. ಅನಂತರದ ರಾತ್ರಿ ಹಗಲು ಯೋಚಿಸಿದ್ದಳು. ಹೇಗೋ ನಿರ್ಧರಿಸಿದ್ದಳು :

ನಿಮ್ಮ ಹೆಸರಿನ ಬಸಿರ ಇಳುವಿ ಬಂದೇನಂತ
ಎಸರಕ್ಕಿ ಜೀವನುಳಿಸಿದೆ

ಅಂದಿನಿಂದ ಮುಂದೆ ಆರು ತಿಂಗಳಿನ ಪಾಡೆಲ್ಲ ಈಗ ಒಂದು ಕ್ಷಣದಲ್ಲಿ ಎರಗಿದಂತೆ ಭಾಸವಾಯಿತು ; ಹಿಡಿತ ತಪ್ಪಿ ಕಣ್ಣು ಮುಚ್ಚಿದಳು......ಎಷ್ಟು

ದರೂ ಈಗಿನ ಬಗೆಯೇ ಬೇರೆ. ಈಗ ಪಡುವ ಪಾಡೆಲ್ಲ ಚಣದ ಪಾಡು. ಮತ್ತು–ಹಿಂದಿನಂತೆ ಈಗ ಇಡಿ ಮುಳುಗುವುದಿಲ್ಲ. ಎಂಥ ನೆರೆಯಲ್ಲೂ ತಲೆ ನೀರಿನ ಮೇಲಕ್ಕೆ ಸಟೆದು ನಿಲ್ಲುತ್ತದೆ; ಕಣ್ಣು ತುಸು ಮಸುಕಾದೀತು, ಕುರುಡಾಗುವುದಿಲ್ಲ–ಅಷ್ಟು ಹೊಳೆದೊಡನೆ ಮತ್ತೆ ಧೈರ್ಯ ಮೆಯ್ದುಂಬಿತು. ಅದೇ ಧೈರ್ಯವನ್ನು ನೆಮ್ಮಿ ತಾನು ಸ್ಥಿರಳಾಗಬೇಕು.........ಸ್ಥಿರಳಾಗದೆ ಈಗ ತನಗೆ ಆದದ್ದಾದರೂ ಏನು?........ಬೇರೆ ದಾರಿಯಿಲ್ಲದೆ ಆರು ತಿಂಗಳು ಪಾಡು ಪಟ್ಟದ್ದಾಯಿತು. ಈಗ ತನಗೆ ನಿರಾಳ, ತಾನೀಗ ಹಗುರಳಾಗಿಬಿಟ್ಟದ್ದಾಳೆ.

ನಿಮ್ಮ ಹೆಸರಿಸ ಉಸಿರ ನೆಲಕಿಟ್ಟು ಹಗುರಾದೆ
ಉಂಡುಪ್ಪಿನ ರುಣ ಸಲಿಸಿದೆ

............ಆಗಬೇಕಾದದ್ದೆಲ್ಲ ಆಗಬೇಕಾದಂತೆಯೇ ಆಯಿತು. ನಿತ್ಯದ ನೆಮ್ಮದಿಯ ಬಾಳಿನಲ್ಲಿ, ಅನೇಕ ಪ್ರೇಕ್ಷಕರು ಕೂಡಿದ ನಾಟಕವೊಂದು ನಡೆದುಹೋಯಿತು; ಭರತವಾಕ್ಯವಷ್ಟೆ ಉಳಿದದ್ದು. ಅನಂತರ ಮತ್ತೆ ಹಿಂದಿನಂತೆಯೇ ನೆಮ್ಮದಿಯಾಗಿ ಆತನ ನೆರೆ ಸೇರಬಹುದು; ಹಿಂದಿನಂತೆಯೇ, ಹಲವು ಬಂದು ಮೆಯ್ದುಂಬಿದರೂ, ಚಿತ್ತ ಹಲವರಿಯದ ಮುಗ್ಧ ದಾಂಪತ್ಯ ಜೀವನ ನಡೆಸಬಹುದು. ಮುಂದೆ ಎಲ್ಲವೂ ನೇರ, ಸರಾಗ........ಹೆಣ್ಣಿನ ದಾರಿ ಯಾವಾಗಲೂ ಹಾಗೆ, ಸರಾಗ. ಗಂಡಿನಂತೆ ಗುಂಡುಹಾದಿ ಸುತ್ತಬೇಕಿಲ್ಲ, ಸಾವಿರ ಕಣ್ಣುಗಳೆದುರು ಸಾವಿರ ಬಾರಿ ಪರೀಕ್ಷೆ ಕೊಟ್ಟು ಏಳಬೇಕಿಲ್ಲ. ಹೆಣ್ಣಿಗೆ ಒಂದೇಬಾರಿ ಪರೀಕ್ಷೆ! ........ತನ್ನೆದುರು ಒಂದೇ ಒಂದು ಪರೀಕ್ಷೆ, ನೇರ ದಾರಿ; ಅನಂತರ ನಿರ್ಯೋಚನೆ....

ಕೊಂಡ ಕೆಂಡದ ಹಾದಿ ಹಿಡಿದು ಬರತೇವಿನ್ನು
ತವರ ಹಂಗ್ಹರಿದು ನಿಮು ಹಿಂದೆ

ಹಾದಿ ನೇರ ಇರುವಾಗ ಕೊಂಡವಾದರೇನು, ಕೆಂಡವಾದರೇನು? ಎದೆ ಅರಳಿದ ಹೆಣ್ಣಿಗೆ ತವರಿನ ಹಂಗು ಹರಿಯುವುದು ಯಾತರ ದೊಡ್ಡಪು?

........ಆ ಹೆಣ್ಣುಮಗಳಿಗೆ ಈಗಷ್ಟೆ ಹೊಸ ಎಚ್ಚರ ಬಂದಂತೆ ತೋರಿತು: ಎದುರಿನ ಕೊಂಡದಲ್ಲಿ ಕೆದರುಗರಿ ಜೆಂಕಿಯ ನೂರು ರೆಕ್ಕೆಗಳು ಸದ್ದಿಲ್ಲದೆ ಬಡಿದುಕೊಳ್ಳುತ್ತಿದ್ದವು. ಊರಿನವರೆಲ್ಲ ಅಲ್ಲಿ ಬಂದು ಕೂಡಿದ್ದರು–

ಮೊದಲಬಾರಿಗೆ ಆಕೆ ಇವೆಲ್ಲವನ್ನೂ ನೋಡಿದಳು. ಉರಿ ಕುಣಿಯುವ ಈ ಕೊಂಡದಲ್ಲಿ, ಸುತ್ತುಗಟ್ಟಿದ ಜನಗಳ ಗುಂಪಿನಲ್ಲಿ ಒಂದೇಬಗೆಯ ನೀರವ; ಆ ನೀರವದಲ್ಲೂ ಕೋಲಾಹಲವಿಡುವ ಕಿರಣಗಳು........ತನ್ನ ಊರಿನವರ ನ್ನೆಲ್ಲ ಆಕೆ ಮತ್ತೊಮ್ಮೆ ದಿಟ್ಟಿಸಿದಳು. ಯಾರೊಬ್ಬರನ್ನೂ ಹೆಸರು ಹಿಡಿದು ಗುರುತಿಸುವ ಸ್ಥಿತಿಯಲ್ಲಿರಲಿಲ್ಲ. ಒಟ್ಟಿನಲ್ಲಿ ಜನ ಕಾಣುತ್ತಿದ್ದರು; ಜೀವದ ಬಣ್ಣ ಬಣ್ಣಗಳು ಕಾಣುತ್ತಿದ್ದವು. ಆ ಬಣ್ಣಗಳಲ್ಲಿ ಆಕೆ ನೆಲ ಹೊಲ ಬೆಳೆ ಬಾಳುಗಳನ್ನು ಕಂಡಳು........

ಇದೇ ಬಗೆಯಲ್ಲಿ ಒಮ್ಮೆ ತಾನೂ ಬಣ್ಣದುಂಬಿ ಭಾರವಾಗಿದ್ದಳು; ಆ ಭಾರದಿಂದಲೇ ತೋಲ ತಪ್ಪದ ನೆಮ್ಮದಿಯ ಬಾಳು ಬಾಳಿದ್ದಳು. ಈಗ ಎಲ್ಲ ಭಾರಗಳೂ ಇಳಿದಿವೆ. ಇಂಥ ಹಸುರಿನಲ್ಲಿ ನೇರ ನಿಲ್ಲಬಲ್ಲೆನೆಂಬುದೂ ಒಂದು ಅಸಾಮಾನ್ಯ ಧೈರ್ಯವೇ........ಈಗಿರುವಂತೆ ಯೋಚಿಸಿದರೆ ತನ್ನ ಪೂರ್ವದ ಬಾಳು ಕೇವಲ ಕನಸಾಗಿ ತೋರುತ್ತದೆ. ಹಾಗೆ ತೋರಿದರೂ ಅದು ಸುಳ್ಳಲ್ಲ, ನಿಜಕ್ಕೂ ನಿಜ; ಆಗಿನ ಋಣಸ್ಮರಣೆಗಾದರೂ ನಿಜ.

ನೆಲಕೆ ರುಣವಾಗಿದ್ವೆ ನೀರ ರುಣವಾಗಿದ್ವೆ
ರುಣವಾಗಿ ಬದುಕಿ ಸುಖವಿದ್ವೆ

—ಪತಿಯ ವೀರ ಮರಣದ ಸುದ್ದಿ ಪವಾಡವೆಂಬಂತೆ ಒಂದು ಕ್ಷಣದಲ್ಲಿ ಆಕೆಯನ್ನು ಬದಲಿಸಿಬಿಟ್ಟಿತ್ತು. ಅನಂತರದ ಆರು ತಿಂಗಳಿನ ದಿವ್ಯದಲ್ಲಿ ಆಕೆಗೆ ಲೋಕದ ಬಣ್ಣ ಕಳೆದು ತನ್ನತನದ ಬಣ್ಣ ಬರುತ್ತಿರುವಂತೆ ಭಾಸ ವಾಗಿತ್ತು. ಆ ತನ್ನತನದ ಬಣ್ಣವೇ ಮಾಗಿದ ದಿನ ಇಂದು.

ಇಂದಲ್ಲ, ಹಿಂದೆಯೇ ತವರು ದಾಟಿದ್ದಳು. ತವರು ದಾಟಿ ತೆವ ರೇರಿದ್ದರೂ ತವರಿನ ಬಣ್ಣ ಮೈಗೆ ಅಂಟಿಕೊಂಡಿದೆಯೆಂಬ ಅನುಭವವಿತ್ತು. ನಡೆದ ಕಥೆಯನ್ನೆಲ್ಲ ತನಗೆ ತಾನೆ ಕಂಡುಕೊಂಡಳಾಗಿ, ಹೇಳಿಕೊಂಡಳಾಗಿ ಆ ಬಣ್ಣವನ್ನೂ ಬೀಳ್ಕೊಟ್ಟಳು. ಇನ್ನೆಲ್ಲಿಯ ಸೆರೆ?

ನೆಲದ ನೀರ ರುಣ ಇಂದಿಗೆ ತೀರಿತಾಗಿ
ಹಂಗು ತನ್ನಂತೆ ಕಳಚ್ಯಾವು

ಹಂಗು ಎಂಬುದು ಮಾತಿನಲ್ಲಷ್ಟೆ ಉಳಿದಿದೆ; ಇನ್ನೊಂದು ಕ್ಷಣದಲ್ಲಿ ಇಲ್ಲವಾಗುವಷ್ಟು ಕ್ಷೀಣವಾಗಿದೆ........ಈಗ ಅರ್ಥವಾಗುತ್ತದೆ, ತಾನೊಬ್ಬ

ಮುಗ್ಧ ಗರತಿಯಾಗಿ ಬಹುಪಾಲು ಒಂಟಿ ಬಾಳು ಬಾಳಿದ್ದರೂ, ತನ್ನಲ್ಲೆ ಒಂದು ಸಂತೆ ನೆರೆಸಿಕೊಂಡು ಬಾಳಿದ್ದಳು, ಅದರ ಅರಿವೂ ಇಲ್ಲದೆ........ ಅಂತೆಯೇ ಆಗ ಸಾವಿಗೆ ಬೇರೆ ಅರ್ಥವಿತ್ತು, ಸುಡುವಿಕೆಗೆ ಬೇರೆ ಅರ್ಥವಿತ್ತು........

ಇನ್ನು ತಾನು ಯಾರನ್ನೂ ಸುಡಬೇಕಿಲ್ಲ. ಮಡಿಲುದುಂಬಿದ್ದ ಮಕ್ಕಳೆಲ್ಲವನ್ನೂ ಮುದ್ದುಗೊಟ್ಟು ನೆಲಕ್ಕಿಳಿಸಿಬಿಟ್ಟಿದ್ದಳು.

ಕೊಂಡ ಕೆಂಡದ ಹಾದಿ ಹಿಡಿದು ಬರುತೇವಿನ್ನು
ತವರ ಹಂಗ್ಹರಿದು ನಿವು ಹಿಂದೆ

ಎಂದಳು ಮತ್ತೊಮ್ಮೆ. ಆದರೆ ಈಗ ಹೇಳಿದ ಒಂದೊಂದು ಮಾತಿನ ಅರ್ಥವೂ ಬೇರೆಯೇ. ಈಗಿನ ಅರ್ಥದಂತೆ ತನ್ನ ಕಾರ್ಯ ಶಿಶುಸಹಜ, ಅತ್ಯಂತ ಸರಳ, ಜೀವಕಾರ್ಯಗಳ ನಡುವಣ ಅಂತರವೇ ತೋರದಷ್ಟು ಸುಲಭ.

........ಇಲ್ಲಿ ಹೂವಿನ ಹೊಸತಿಲಿನಿಂದ ಅಡಿಯೆತ್ತಿದ ಕಂಪು, ಎದುರಿನಲ್ಲಿ ಕೆನೆಗಾಳಿಯ ಹಾಸು; ಇಲ್ಲಿ ನಲ್ಲೆ, ಎದುರು ನಲ್ಲ; ಇಲ್ಲಿ ಪ್ರಾಣಾಗ್ನಿ ಎದುರು ಅಗ್ನಿಪ್ರಾಣ. ನಡುವೆ ಯಾತರ ಅಂತರ? ತವರು ಕೇವಲ ತೋರಿಕೆ, ಹಂಗು ಕೇವಲ ಹೆಸರು.

ತವರ ಹಂಗ್ಹರಿದು ಬರುತೇವೆ ಎಂದ್ಹೇಳಿ
ಮಾಸ್ತ್ಯಮ್ಮ ಕೊಂಡ ಧುಮುಕ್ಯಾಳು

ಹೀಗೆ,

ಮೂರು ಸಂಜೆಗೆ ಮುಂಚೆ ಊರ ದೇವರ ಗುಡಿಲಿ
ನೂರೆಂಟು ದೀಪ ಹಚ್ಚಿಟ್ಟು
ಊರ ಮನೆಯು ಮರೆತು ಚಣದಾಗೆ ಮಾಸ್ತ್ಯಮ್ಮ
ತವರ ಹಂಗ್ಹರಿದು ನಡೆದಳು

—ಈ ಕಥೆ ಮುಗಿದು ಮುನ್ನೂರು ವರ್ಷಗಳು ಕಳೆದುಹೋಗಿವೆ. ಆ ಊರು ಈಗ ಕಾಡಿನಲ್ಲಿ ತಲೆಮರೆಸಿಕೊಂಡಿದೆ. ಅಂಥದೇನು ನಡೆಯಿತೋ ಯಾವ ನಾಚಿಕೆ ಚಪ್ಪಡಿಯೆಳೆದಿತೋ—ಆ ಹೆಣ್ಣುಮಗಳು ಮುಚ್ಚಂಜೆಯಲ್ಲಿ ನೂರೆಂಟು ದೀಪ ಹಚ್ಚಿಹೋದ ಗುಡಿ ಮೆಯ್ ಭಾರವಾಗಿ ನೆಲದೊಳಕ್ಕೆ ವಿಶ್ರಮಿಸಿದೆ; ಮುಚ್ಚಂಜೆಯಲ್ಲಿ ಸಾವಿರೆಂಟು ತಾರಕ್ಕಿ

ಗಳ ನಿತ್ಯದೀಪೋತ್ಸವವನ್ನು ಉದಾಸೀನವಾಗಿ ಕೊಳ್ಳುತ್ತದೆ. ತುಸು ದೂರದಲ್ಲಿ, ಚಿತ್ತಾರ ಕೊರೆದ ಒಂದು ಕಗ್ಗಲ್ಲು ಮೌನವಾಗಿ ನಟ್ಟಿದೆ. ಇಂದಿಗೂ, ಮುಚ್ಚಂಜೆ ಕಳೆದು ತಿಂಗಳುಕ್ಕುವಾಗ ಆ ಕಲ್ಲಿನ ಬಳಿ ಹೋಗಿ ಕುಳಿತರೆ, ಯಾವಾಗಲೊಮ್ಮೆ ಎಂದೋ ಒಂದು ದಿನ ಆ ಹೆಣ್ಣುಮಗಳು ಮೇಲೆದ್ದು ಬಂದು ಮತ್ತೆ ತನ್ನ ಕಥೆಯನ್ನು ಸಾದ್ಯಂತ ಅಭಿನಯಿಸಿ ತೋರಿಸಿಯಾಳು.

---

## ೮. ನಿಮು ಕೂಡಾಟಕೆ ಬಂದೇವೆ

‘ ಈಗಲೂ ಬದುಕುತ್ತಾರೆ ಜನ, ಯಾವ ಮಣ್ಣಿಗೋ ! ಬದುಕ ಬೇಕೆಂದು ಬದುಕುವುದಲ್ಲ, ಸಾಯಲು ಹೆದರಿ ಬದುಕುವುದು. ಏನು ಮಾಡಲೂ ಭಯ, ಮಾಡದಿರಲೂ ಅಳುಕು. ಬದುಕಿದರೆ ಹಿಂದಿನ ಜನಗಳ ಹಾಗೆ ತುಂಬು ಬಾಳು ಬದುಕಬೇಕು. ಸಾವಿನ ಸ್ಮರಣೆಯಿಂದ ಧೈರ್ಯ ಗೊಂಡು ಬದುಕಿದವರು ನಮ್ಮ ಹಿಂದಿನ ಜನ. ಏನು ಮಾಡಿಯೂ ನಿರ್ಭಯ ದಿಂದ ಬದುಕಿದವರು, ಏನು ಮಾಡದೆಯೂ ನಿಶ್ಚಿಂತರಾಗಿ ಬದುಕಿದವರು.... ಅವರ ಬದುಕಿನ ಮುಂದೆ ನಮ್ಮದೆಂಥ ಬಂಜೆಬದುಕು ’–ದೀಪಾವಳಿಯ ಮೂರು ದಿನ ಪಟಾಕಿ ಸುಟ್ಟು ಮತ್ತೆ ನಾಲ್ಕನೆಯ ದಿನ ಎಂದಿನಂತೆ ತೆಪ್ಪ ಗಾಗಿ ಸಪ್ಪೆ ಬಾಳು ಸವೆಯುವ ಇಂದಿನ ಜನರನ್ನು ಕಂಡು ಹಾಗೆನ್ನುವವ ರುಂಟು. ಹಾಗೆನ್ನುವಾಗ ಆ ಭೂತಪ್ರಿಯರನ್ನು ಪರಿಹಾಸಗೊಳಿಸುವಂತೆ ದೊಡ್ಡದಾಗಿ ನಕ್ಕುಬಿಡಿ. ಆಗ ಅವರ ಕೆರಳು ನೋಡಿ. ಹಿಂದಿನ ಜನದ ತುಂಬು ಬದುಕಿನ ಸರಕನ್ನು ನಿಮ್ಮ ಕಣ್ಣು ಹೂಳುವಷ್ಟು ತೆಗೆತೆಗೆದು ಎಸೆದು ಚಣದಲ್ಲಿ ನಿಮ್ಮನ್ನೆ ಬೆರಗೆಬ್ಬಿಸಿಬಿಡುವ ಚಂದ ನೋಡಿ.

ಅಂಥ ಕಥೆ ಸಾವಿರ ಉಂಟು. ಮಾದರಿಗೆ ಬೇಕಿದ್ದರೆ, ಒಂದು ಕೇಳಿ : ನಮ್ಮ ಜಾನಪದ ದೀಪಧಾರಿಗಳು ಹಾಡಿ ಹೊಗಳುತ್ತಾರೆ :

ಜಾವ ಹರಿವಾಗೆದ್ದರು ಸ್ವಾಮಿಯೊಂದು
ಜಳಕ ಮಾಡ್ಯಾರು–ಸ್ವಾಮಿಯೊಂದು
ತಿಲಕ ತೀಡ್ಯಾರು

ಅನಂತರ ?.........ಧ್ಯಾನಕ್ಕೆ ಕುಳಿತಿರಬಹುದೆಂದು ಊಹಿಸಿದಿರಾ?— ಸೋತಿರಿ ! ‘ಸ್ವಾಮಿ’ ಎಂದ ಮಾತ್ರಕ್ಕೆ ಅವರು ಮಠದ ‘ ಸಂನ್ಯಾಸಿ ’ಗಳಲ್ಲ. ........ಮೂವತ್ತು ಸೀಮೆಯ ಆ ಚೆಲುವು ನಾಡಿನ ಒಡೆಯ. ಮೂವತ್ತರ ಪ್ರಾಯ ಮೀರಿದ್ದಿರಬಹುದು, ಅಷ್ಟೆ. ಅರಸುತನ ಕೊಂಡು ಇನ್ನೂ ಹತ್ತು ವರ್ಷ ಆಯಿತೋ ಇಲ್ಲವೊ, ಅಷ್ಟರಲ್ಲಿ ಜನಗಳಲ್ಲಿ ‘ ನಮ್ಮ ದೊರೆ ’ ‘ ನಮ್ಮ

ಸ್ವಾಮಿ' ಎಂದು ಹೆಸರಾಗಿದ್ದಾರೆ. ಜನರ ಮನಸ್ಸಿಗೆ ಪ್ರಿಯನಾದ ಸ್ವಾಮಿಯ ದೇಹ ಕೂಡ ಕಣ್ಣಿಗೆ ಹಿತವಾಗುವಂಥದು : ಪುರುಷಾಕಾ ತಾಮ್ರವರ್ಣದ ಸಮೆದಿಟ್ಟಂಥ ಮೂರ್ತಿ. ಅವರ ಕಥೆಯನ್ನೆ ಈ ಹೇಳುತ್ತಿರುವುದು.

ಅಂಬಾರಬಣ್ಣದ ಸ್ವಾಮಿಯೊಂದು
ಪಟ್ಟೆನುಡುವರು–ಮ್ಯಾಲೊಂದು
ನ್ಯಾವಳ ಬಿಡುವರು

ಆಕಾಶವರ್ಣದ ಪಟ್ಟೆಯಮೇಲೆ ಬಂಗಾರದ ನೇವಳ ಜೋಲಿಸಿದರೆ ಆ ಚೆ ಹೇಗೆ ಕಂಡಾರು ಊಹಿಸಿಕೊಳ್ಳಿ.

ಜರತರ ಹಳಕಿನ ಸ್ವಾಮಿಯೊಂದು
ಕವಚ ತೊಡುವರು–ಮ್ಯಾಲೊಂದು
ಪದಕನಿಡುವರು
ಪದುಮ ಕಟ್ಟಿದ ಸ್ವಾಮಿಯೊಂದು -
ಉಂಗುರನಿಡುವರು–ಕೊರಳಾಗೆ
ಬಂಗಾರ ತೊಡುವರು

ಎಲ್ಲಕ್ಕಿಂತ ಚಂದವೆಂದರೆ,

ಮೂವತ್ತು ಮಲಕಿನ ಸ್ವಾಮಿಯೊಂದು
ಮಂಡಾಸು ಬಿಗಿವರು–ಮ್ಯಾಲೊಂದು
ಚೆಂಡ್ಹೂ ಮುಡಿವರು

ಮಲಕಿನ ಮುಂಡಾಸು ಬಿಗಿದು ಅದರಮೇಲೆ ತುರಾಯಿಯಂತೆ ಒಂ ಚೆಂಡುಹೂ ಮುಡಿದರೆ ಈ ಸೊಬಗುಗಾರನ ಸಿಂಗಾರ ಮುಗಿಯಿತು. ಆ ಹುಡುಗುಮೀಸೆಗೂ ಒಂದು ಗಾಂಭೀರ್ಯ ಮೂಡುತ್ತದೆ; ಎತ್ತರಕ ಒಂದು ಒಪ್ಪ ಬರುತ್ತದೆ; ಸಿಂಗಾರಕ್ಕೊಂದು ಸವರುಗೊನೆಯಾಗುತ್ತ ಇಷ್ಟಾದ ಮೇಲೆ....ಹೇಳಲೇಬೇಕು, ಎದೆಯೊಳಗಿನ ಮುಳ್ಳಿನ ಮುರುಕು

ಆಳೀರು ನಿಲುವಿನ ಸ್ವಾಮಿಯೊಂದು
ಕನ್ನಡಿ ನೋಡ್ಯಾರು–ಕುಡಿಯೆತ್ತಿ
ಮೀಸೆ ತೀಡ್ಯಾರು

........ಅಷ್ಟಾದರೂ ಕೂಡ, ಉಡುಗೆಗೆ ತಕ್ಕಂತೆ ಗಂಭೀರವೇ ಆಗಿ, ಒಳಗಿನ ಕುದಿ ಹೊರಗುಕ್ಕದಂತೆ ಮೆಲುನಗೆಯನ್ನು ಸಾವರಿಸಿಕೊಂಡು ನಿಲುವುಗನ್ನಡಿಯೆದುರು ನಿಲ್ಲುತ್ತಾರೆ ಸ್ವಾಮಿ....—ರಸಿಕರಿಗೆ ಈ ಸಂಕಟ ಸುಲಭವಾಗಿ ತಿಳಿದೀತು: ಸಿಂಗಾರ ಮುಗಿಸಿಕೊಂಡ ಹರೆಯದ ಗಂಡು ಎಲ್ಲಾದರೂ ಕನ್ನಡಿ ನೋಡುವುದುಂಟೆ? ಅವನಿಗೆ ತನ್ನ ಚೆನ್ನಿಯ ಕಣ್ಣೇ ಕನ್ನಡಿ, ಕೆನ್ನೆಯೇ ಕನ್ನಡಿ, ಮೆಯ್ ನವಿರು ನವಿರುಗಳೂ ಕನ್ನಡಿ....ಇಂಥ ಸುಭಗನಿಗೂ ಆ ಸೌಭಾಗ್ಯಯೋಗವಿಲ್ಲ. ತನ್ನ ಸರ್ವಸ್ವವನ್ನೂ ಪ್ರತಿಫಲಿಸಿರಲು ಆ ಪ್ರತಿಫಲಕವನ್ನೆ ಪ್ರತಿಫಲವೆಂದು ಹಿಗ್ಗುವಾಗ, ಸೆಟೆದ ಮೀಸೆಗೆ ಮುನಿದು ಮುಖ ಮೊಗ್ಗುಮಾಡಿ ಮತ್ತೊಡನೆಯೇ ಮಮತೆಯಿಂದ ನೇವರಿಸುವ ಮೃದುಹಸ್ತ ಅವರ ಪಾಲಿಗೆ ಇಲ್ಲವಾಗಿತ್ತು....—ಅದೊಂದು ರಹಸ್ಯವೇ: ಯಾರಿಗೂ ತಿಳಿಯದು: ರಸವೊಸರಿದರೂ ತಿಳಿಯಾಗಿ ಒಳಗುದೋರಿದರೂ ಅದು ಕಲ್ಲೇ ಆಗಿರುವ, ಅಂಥ ಹಾಲುಗಲ್ಲಿನಲ್ಲಿ ಮಾಡಿದ್ದಿರಬೇಕು ಈ ಅರಸನ ಹೃದಯ. ಹತ್ತು ಆಡಿ ಹತ್ತು ಹಬ್ಬಿಸುವ ನಾಲಗೆಯೂ ಇವರ ಎದುರು ಸೋತಿತು. 'ಯೋಗ ಒದಗಿದರೆ ಹಾಗಾದೀತು, ಯೋಗ ಒದಗಿದರೆ ನಾವೂ ಒಬ್ಬ ಅರಸಿಯನ್ನು ಓಲೈಸಿಯೇವು' ಎಂದುಕೊಂಡೇ ಜನ ತಮ್ಮನ್ನು ಸಂತಯಿಸಿಕೊಂಡರು......—ಇದನ್ನೆಲ್ಲ ಕುರಿತು ಎಷ್ಟುಬಾರಿ ಆಡಿದುದಿಲ್ಲ, ಮತ್ತೆಷ್ಟುಬಾರಿ ಆಡದೆಯೇ ನೊಂದುದಿಲ್ಲ. ಮತ್ತೇಕೆ ಆ ಮಾತು? ಇಂದಿನ ಕಥೆಯನ್ನು ನೋಡೋಣ:

ಇಷ್ಟೆಲ್ಲ ಸಿಂಗರಗೊಂಡ ಸ್ವಾಮಿ ಮತ್ತೇನು ಒಡ್ಡೋಲಗಕ್ಕೆ ಚಿತ್ತೈಸಿದರೆ? ಇಲ್ಲ. ಅಂಥ ಸಂಪ್ರದಾಯ ನಡೆಯುವುದು ವರ್ಷಕ್ಕೆ ಎಲ್ಲೊ ಹತ್ತುಬಾರಿ. ಆದರೆ, ನಿತ್ಯವೂ ಹೀಗೆ ಸಿಂಗರಗೊಳ್ಳುತ್ತಾರೆ. ಮತ್ತೇನು ಮಾಡಿಯಾರೆಂದು ಊಹಿಸುವುದು ಮಾತ್ರ ಬಲು ಕಷ್ಟ. ಒಮ್ಮೆ ಕುದುರೆ ಹತ್ತಿ ಸೀಮೆ ಸುತ್ತಲು ಹೊರಟರೂ ಆಯಿತೆ, ಒಮ್ಮೆ ಎಲ್ಲೊ ಒಂದೆಡೆ ಕೋಲಾಟ ನೋಡುತ್ತ ಕುಳಿತರೂ ಆಯಿತೆ, ಒಮ್ಮೆ ದಳವನ್ನೆಲ್ಲ ಕೊಂಡೊಯ್ದು ಕೆರೆ ಏರಿ ತುಂಬಿಸುತ್ತ ನಿಂತರೂ ಆಯಿತೆ, ಒಮ್ಮೆ ಊರ ಚಾವಡಿಯಲ್ಲಿ ಕುಳಿತು ನ್ಯಾಯ ತೀರಿಸುತ್ತ ಕಳೆದರೂ ಆಯಿತೆ; ಒಮ್ಮೆ ಇದೆಲ್ಲವನ್ನೂ ಮರೆತವರಂತೆ ಬೆಟ್ಟದ ಮುಡಿಯ ಶಂಭುಲಿಂಗನ ಗುಡಿ ಸೇರಿ ದಿನವನ್ನು ಸವೆದರೂ

ಆಯಿತೆ. ಇಂದು ಮಾತ್ರ, ತುಂಬ ಅಪರೂಪವಾಗಿ, ಅವರ ಬಯಕೆ ಬೇರೆಯೇ ಆಯಿತು :

ಯ್ಯಾಲಕ್ಕಿ ಕಾನಾಗೆ ಸ್ವಾಮಿಯೊಂದು
ಬ್ಯಾಟೆ ಬಯಸ್ಯಾರು–ಸ್ವಾಮಿಯೊಂದು
ಬ್ಯಾಟೆ ಕೂಡಿಸ್ಯಾರು

ಅವರು ಬಯಸುವುದೂ ಹೊತ್ತಲ್ಲ, ಆ ಬಯಕೆ ಕೂಡುವುದೂ ಹೆಚ್ಚು ಹೊತ್ತಲ್ಲ. ಸ್ವಾಮಿ ಬೇಟೆಗೆ ಹೊರಡುತ್ತಾರೆಂದು ಕೇಳಿದಾಗ ಆಶ್ಚರ್ಯ ಸಂತೋಷಗಳಿಂದ ದಳವೆಲ್ಲ ಸಜ್ಜುಗೊಂಡಿತು. ಊಳಿಗದವರು ಮನೆವಾರ್ತೆಯವರು ಎಲ್ಲರೂ ತಂತಾನೆ ಲಗುಬಗೆಯಿಂದ ಓಡಾಡಿದರು.

ಯಾವ ಸಣ್ಣ ಕೆಲಸ ಆಗುವುದಿರಲಿ ಎಲ್ಲವೂ ಸ್ವಾಮಿಗೆ ಅಚ್ಚುಕಟ್ಟಾಗಿ ನಡೆಯಬೇಕು ; ತನ್ನಿಂದ ಆಗುವ ಎಲ್ಲದರಲ್ಲೂ ತನ್ನ ರುಚಿಯ ಬಣ್ಣ ಎದ್ದು ತೋರುತ್ತಿರಬೇಕು. ಹಾಗೆ ದಳವನ್ನು ಸಜ್ಜುಗೊಳಿಸುವುದಕ್ಕೇ ಸ್ವಾಮಿಗೆ ಎರಡು ತಾಸು ಹಿಡಿಯಿತು.

ಕತ್ತಿಕೋವೆರನೆಲ್ಲ ಸ್ವಾಮಿ ತನ್ಹಂಗೆ ಸವ್ಣರಿಸಿದ
ಸ್ವಾಮಿ ಅವನ್ಹಂಗೆ ಸವ್ಣರಿಸಿದ
ಈಟಿಭರ್ಜಿರನೆಲ್ಲ ಸ್ವಾಮಿ ತನ್ಹಂಗೆ ಸವ್ಣರಿಸಿದ
ಸ್ವಾಮಿ ಅವಸ್ಥಂಗೆ ಸವ್ಣರಿಸಿದ
ಆನೆಕುದುರೆರನೆಲ್ಲ ಸ್ವಾಮಿ ತನ್ಹಂಗೆ ಸವ್ಣರಿಸಿದ
ಸ್ವಾಮಿ ಅವನ್ಹಂಗೆ ಸವ್ಣರಿಸಿದ

ಎಲ್ಲವೂ ಮನಸ್ಸಿನಂತೆ ಸಮರ್ಪಕವಾದಮೇಲೆ ಸ್ವಾಮಿ ತಾವೂ ಸಿದ್ಧರಾದರು.

ಕತ್ತಿಕೋವಿನೆಲ್ಲ ಸ್ವಾಮಿ ಸೊಂಟಕೆ ಕಟ್ಯಾರು
ಸ್ವಾಮಿ ಬೆನ್ನಿಗಿಟ್ಟರು

ಮತ್ತೊಂದು ಚಣದಲ್ಲಿ ಅರಸನನ್ನು ಮುಂದಿಟ್ಟುಕೊಂಡು ಬೇಟೆಯ ತಂಡ ಊರಿನ ರಥಬೀದಿಯಲ್ಲಿ ಧಾವಿಸುತ್ತಿತ್ತು :

ಬತ್ತಲೆಗುದುರೆಯ ಸ್ವಾಮಿಯೊಂದು
ಹತ್ತಿ ನಡೆದರು–ಉಳಿದೊರು
ಸುತ್ತಿ ನಡೆದರು

ರಥಬೀದಿಯ ಇಕ್ಕೆಲಗಳಲ್ಲೂ ಮನೆಯ ಹೆಂಗಸರು ಮಕ್ಕಳಾದಿಯಾಗಿ ಓಡೋಡುತ್ತ ಬಂದು ಈ ಚೆನ್ನಿಗರಾಯನನ್ನು ಕಂಡು ಸಂತುಷ್ಟರಾದರು.

ಊರು ದಾಟಿದ್ದೆ ತಡ, ಮೆರವಣಿಗೆಯ ಮಂದಗತಿಯಲ್ಲಿ ಸಾಗುತ್ತಿದ್ದ ತಂಡ ನಾಗಾಲೋಟಕ್ಕಾರಂಭಿಸಿತು. ಸ್ವಾಮಿಯೇ ಮುಂದಾಗಿ ಕುದುರೆ ಓಡಿಸುತ್ತಿರುವಾಗ ಯಾರು ಹಿಂದುಳಿದಾರು ?

ಎಂಟೆಂಟು ಹರಿದಾರಿ ಸ್ವಾಮಿಯೊಂದು
ಸುಂಟರಗಾಳಿ ಹಂಗೆ–ಸ್ವಾಮಿ
ಬಂಟರ ನಡೆಸ್ಯಾರು

ಎಂಟು ಹರಿದಾರಿಗಳ ಉದ್ದದ ದಾರಿ ಎರಡೇ ತಾಸಿನಲ್ಲಿ ಕಳೆದ ಹೋಯಿತು. ಎದುರಿನದೇ 'ಏಲಕ್ಕಿ ಕಾನು'. ಹೆಸರಷ್ಟೆ ಅಲ್ಲ, ಆ ಕಾಡಿನ ತುಂಬ ಏಲಕ್ಕಿಯ ತೋಟ ಬೆಳೆಯಿಸಿಟ್ಟಂತಿತ್ತು. ಸಮೀಪಕ್ಕೆ ಬರು ವಾಗಲೆ, ಆಗಷ್ಟೆ ಹಾಲುದುಂಬಿದ ಏಲಕ್ಕಿಯ ಮೃದುಪರಿಮಳ ಅಲೆಯಲೆ ಯಾಗಿ ಬಂದು ಸೆಳೆಯುತ್ತಿತ್ತು. ಹತ್ತಿರ ಬಂದಂತೆ ಸಾಲುಃಧೂಪದ ಕಂಪೂ ಬೆರೆತು ಆಹ್ಲಾದಮಯವಾಯಿತು. ತೂಗುಜೊಂಪೆಗಳು ಹೂ ಸುರಿಯುತ್ತಿರಲು ಅರಸಿನ ಕುದುರೆ ಕಾಡಿನ ಒಳಹೊಕ್ಕಿತು.

ಯಾಲಕ್ಕಿ ಕಾನಿನ ನಡುಗಡೆ ಧೂಪದ ಸಾಲಾಗೆ
ಹುಡಿಹೊಗೆಯೆದ್ದವು–ಮಿಗನುರಿ
ಗಿಡಬಿದ್ಹೋಡ್ಯಾವು

ಧೂಪದ ನೆರಳಿನಲ್ಲಿ ಚಣ ತಂಗಿದ್ದುದಷ್ಟೆ; ಮತ್ತೊಡನೆಯೇ ಬೇಟೆ ಆರಂಭವಾಯಿತು. ಅರಸುಬೇಟೆಯ ಕೋಲಾಹಲ ಕಾಡಿನ ಬಸಿರನ್ನು ಗಡಗುಟ್ಟಿಸುತ್ತಿತ್ತು :

ಮೊಲನ ಕಂಡೇವಿಲ್ಲಿ ಸ್ವಾಮಿಯೊಂದು ಮಿಕನ ಕಂಡೇವು

ಕೂಗಿದ ಕೂಗು ತಿರುಗಿ ಹೊಳಲಿಡುವಷ್ಟರಲ್ಲಿ,

ಮೊಲನ ಬಡಿದರು ಸ್ವಾಮಿಯೊಂದು ಮಿಕನ ಕಡಿದರು

ಅಷ್ಟರಲ್ಲಿ ಮತ್ತೊಂದು ದಿಕ್ಕಿನಿಂದ ಕೂಗು :

ನರಿಯ ಕಂಡೇವಿಲ್ಲಿ ಕಾನ್ ಕುರಿಯ ಕಂಡೇವು

ಕಂಡುದೆಲ್ಲಿಂದು ನೋಡುವನಿತರಲ್ಲಿ,

ನರಿಯ ಹೊಡೆದರು ಸ್ವಾಮಿ ಕಾನ್ ಕುರಿಯ ಬಡಿದರು

ಅಂಥ ಕಾಡಿನಲ್ಲಿ ಮೃಗಗಳಿಗೇನು ಬರವೆ?

ಬರಕ ಕಂಡೆವಿಲ್ಲಿ ಸ್ವಾಮಿ ಕುರಕ ಕಂಡೇವು

ಒಂದೇ ಚಣ,

ಬರಕ ಕೆಡವ್ಯಾರು ಸ್ವಾಮಿಯೊಂದು ಕುರಕ ಮಡಿವ್ಯಾರು

ಒಮ್ಮೆ ಭರ್ಜಿಯಿಂದಲೇ ಚುಚ್ಚುವರು, ಮತ್ತೊಮ್ಮೆ ಕತ್ತಿ ಬಳಸುವರು, ಇನ್ನೊಮ್ಮೆ ಕೋವಿ ಕೊಳ್ಳುವರು; ಆಯುಧ ಬದಲಿಸಿಕೊಳ್ಳಲಷ್ಟೆ ತೆರವು, ಅಷ್ಟರಲ್ಲಿ ಕೂಗು ಬರುತ್ತದೆ.

ಕಡವ ಕಂಡೇವಿಲ್ಲಿ ಸ್ವಾಮಿ ಕಾಟಿ ಕಂಡೇವು

ಕಡವ ಯಾತರದು? ಕಾಡುಕೋಣ ಎಂದಾಗ ಮಾತ್ರ ಸ್ವಾಮಿಯ ಹಿಂದೆಯೇ ಇನ್ನಿಬ್ಬರು ಧಾವಿಸಿದರು. ಆದರೆ ಹಿಂಬಾಲಿಸಿದ ಇಬ್ಬರು ಅಲ್ಲಿ ಸೇರುವಾಗ ಕೋಣ ಉರುಳುತ್ತಿತ್ತು, ಸ್ವಾಮಿ ಕುದುರೆ ತಿರುಗಿಸಿದ್ದರು.

ಕಡವ ಕೊಂದರು ಕಾಟಿಯನುರುಳಿಸಿ ಬಂದರು

ಮತ್ತೆ ಎತ್ತಣಿಂದ ಕೂಗು ಬಂದೀತೋ ಎಂದು ಎಲ್ಲರೂ ತುದಿಗಾಲಿನಲ್ಲಿರಲು ಸ್ವಾಮಿ ಫಕ್ಕನೆ ಕುದುರೆಯಿಂದ ಕೆಳಗೆ ಧುಮುಕಿದರು, ಬದಿಯ ಮರದಡಿಗೆ ಹೋಗಿ ಕುಳಿತರು. ಸ್ವಾಮಿಗೆ ಬೇಟೆ ಸಾಕೆನಿಸಿತಿರಬೇಕೆಂದು ಊಹಿಸಿ ಯಾವನೊ ಒಬ್ಬ ಕೂಗುಟ್ಟಿದ; ಪೊದೆಗಳಿಂದ ಒಬ್ಬೊಬ್ಬರಾಗಿ ಎಲ್ಲರೂ ಈಚೆ ಬಂದರು....—ಸ್ವಾಮಿಯ ಇಚ್ಛೆಯೇ ಬೇರೆ:

ಆರಾರು ಮಾರಿನ ಮ್ಯಾಲೆ ಬಾರುಪಟ್ಟೆಯ
ಬಾರುಪಟ್ಟೆಯ-ಬ್ಯಾಟೆಗೆ
ಹುಲಿಯ ಬಯಸ್ಯಾರು

ಅದೆಷ್ಟರ ಮಾತು ಎನ್ನುವಂತೆ ಹುಡುಕಾಳುಗಳು ತಾವು ಅಣಿಗೊಂಡುದನ್ನು ಸೂಚಿಸಿದರು. ಆದರೆ, ಸ್ವಾಮಿಗೆ ಈ ಕೂಡುಬೇಟೆ ಸಾಕೆನಿಸಿತೋ ಒಬ್ಬರೇ ಕಾಡು ಸುತ್ತಿ ಸುಯ್ಯಬೇಕೆನಿಸಿತೋ—ಯಾರು ಬಲ್ಲರು – ಆಳುಗಳನ್ನು ನಿಲ್ಲಿಸಿದರು.

ಎಲ್ಲರೂ ಕಾಡಿನ ದಿಕ್ಕುದಿಕ್ಕುಗಳಿಗೆ ಹಂಚಿಹೋಗುವುದೆಂದು ಸ್ವಾಮಿ ಸೂಚನೆ ಕೊಟ್ಟರು: ತಾವಿದ್ದ ನಡುವಿಗೆ ಅತ್ತಿತ್ತಣಿಂದ ಮೃಗಗಳನ್ನು

ಅಟ್ಟಬೇಕೆಂದರು. ಸ್ವಾಮಿಯೊಬ್ಬರನ್ನೆ ಬಿಟ್ಟುಹೋಗುವುದು ಹೇಗೆ ಎಂಬ ಸಂದೇಹ ತೋರಿದರೂ ಹಾಗೆ ಕೇಳುವ ಎದೆ ಯಾರಿಗೆ ?

ಕತ್ತಿಕೋವೆರನೆಲ್ಲ ಸ್ವಾಮಿ ಅತ್ತಲಟ್ಟಿದ
ಸ್ವಾಮಿ ಇತ್ತಲಟ್ಟಿದ
ಈಟಿಭರ್ಜಿರನೆಲ್ಲ ಸ್ವಾಮಿ ಅತ್ತಲಟ್ಟಿದ
ಸ್ವಾಮಿ ಇತ್ತಲಟ್ಟಿದ
ಆನೆ ಕುದುರೆರನೆಲ್ಲ ಸ್ವಾಮಿ ಅತ್ತಲಟ್ಟಿದ
ಸ್ವಾಮಿ ಇತ್ತಲಟ್ಟಿದ

ಎಲ್ಲರೂ ಅತ್ತಿತ್ತ ಚದುರಿದಮೇಲೆ ಸ್ವಾಮಿಗೆ ಹಗುರವೆನಿಸಿತೇನೋ, ಮೆಲ್ಲಗೆ ಎದ್ದು ಕುದುರೆಯೇರಿದರು.

ಬತ್ತಲೆಗುದುರೆಯ ಸ್ವಾಮಿಯಾಗ
ಹತ್ತಿ ನಡೆದರು–ಮತ್ತ್ಯೋರು
ಎತ್ತ್ಯೋ ನಡೆದರು

........ಇಟ್ಟಣಿಸಿದ ದಾರಿಯಲ್ಲಿ ಮೆರವಣಿಗೆ ನಡೆಯುವ ಮದುಮಗನಂತೆ ಮೆಲುನಡೆಯಿಂದ ಸಾಗಿದರು. ಸುತ್ತಣ ಸೊಬಗನ್ನು ಹೀರುತ್ತ, ಹೀರಿದ ಸವಿಯನ್ನು ಎದೆಯ ಭರಣಿಯೊಳಕ್ಕೆ ತುಂಬಿಕೊಳ್ಳುವಂತೆ ಕಣ್ಣು ಅರೆ ಮುಚ್ಚುತ್ತ ಸಾಗಿದರು........ಒಂದು ಗಳಿಗೆಯೊಳಗಾಗಿ ಈ ಕಾಡು ಬದಲಾಗಿತ್ತು, ಏನೋ ಆಗಿಹೋಗಿದ್ದಿತು ! ಸುತ್ತೆಲ್ಲ ಸಾವಧಾನವಾಗಿ ಕಣ್ಣು ಹರಿಯಿಸಿ ಅರೆಮುಚ್ಚಿದಾಗ ಅವರಿಗೆ ಬೆಟ್ಟದ ಮುಡಿಯ ಶಂಭುಲಿಂಗನ ಗುಡಿಯಲ್ಲಿ ಕುಳಿತು ಕಣ್ಣನ್ನು ಅರೆಮುಚ್ಚಿದಂತೆ ಭಾಸವಾಗಿರಬೇಕು : ತಲೆ ತಾನಾಗಿಯೇ ಬಾಗುತ್ತಿತ್ತು........ಮೃಗಗಳನ್ನು ಇತ್ತ ಅಟ್ಟುವಂತೆ ಹೇಳಿದ ಮಾತು ಅವರಿಗೆ ಮರೆತೇ ಹೋಗಿದ್ದಿತೇನೋ. ಎತ್ತ ಎಂದು ಯೋಚಿಸದೆ ನೇರ ಸಾಗುತ್ತಿದ್ದರು. ಈಗ ಆಚೀಚಿನ ಓಡುಮಿಗಗಳೂ ಅವರ ಕಣ್ಣಿಗೆ ಸುಲಭವಾಗಿ ಬೀಳುವಂತಿರಲಿಲ್ಲ. ಆದರೂ–ಅದೇ ಆಶ್ಚರ್ಯ !–ಒಂದು ಮಿಗ ಅವರ ಕಣ್ಣನ್ನು ಸೆಳೆದೇ ಬಿಟ್ಟಿತಲ್ಲ.

ಬತ್ತಲೆಗುದುರೆಯ ಸ್ವಾಮಿಯಾಗ
ಹತ್ತಿ ನಡೆದರು–ಮತ್ತೊಂದು
ಮಿಕವ ಕಂಡರು

..........ಇದ್ದಕ್ಕಿದ್ದಂತೆ ಏನೋ ಮಾಯಕವಾಯಿತೆ? ತಾಸಿಗೆ ಮುನ್ನ ಕಾಡಾಗಿದ್ದುದು ಈಗ ನಂದನವನವಾಗಿ ತೋರುತ್ತಿದೆ. ತಾಸಿಗೆ ಹಿಂದೆ ಎಷ್ಟು ಜಿಂಕೆ ಕಾಣಲಿಲ್ಲ? ಆದರೆ ಈ ಜಿಂಕೆ........

ಲಕಲಕ ಕಣ್ಣಿನ ಮೆಯ್ಯೆಲ್ಲ ಚಿಕ್ಕಿ ಚಿಕ್ಕಿ ಬಣ್ಣದ
ಕಕ್ಕರಗೋಡಿನ–ಮಿಕವೊಂದು
ತಕ ತಕ ಓಡಿತು

ನಿಬ್ಬೆರಗಾದ ಸ್ವಾಮಿಯ ಮುಖದಲ್ಲಿ ಒಂದು ಹುಸಿನಗೆ ಹಾದುಹೋಯಿತು. ರಾಮದೇವರ ಕಥೆ ನೆನಪಾಗಿತ್ತೇನೋ ಅವರಿಗೆ........ಸ್ವಾಮಿಯ ಕಣ್ಣು ಆ ಮಿಗದಲ್ಲೆ ಹುಗಿದುಹೋಗಿತ್ತು. ಕುದುರೆಗೆ ಏನು ತೋರಿತೋ, ಅದ ಮೊದಲಿಗಿಂತ ವೇಗವಾಗಿ ಹೆಜ್ಜೆಯಿಡತೊಡಗಿತು. ಮಿಗವನ್ನು ನೋಡ ನೋಡುತ್ತ, ಸ್ವಾಮಿಯ ಕುತೂಹಲಬುದ್ಧಿ ಆ ಮಿಗದಲ್ಲೆ ಕೇಂದ್ರೀಕೃತ ವಾಗಿ ತೀವ್ರಗೊಂಡ ಒಂದು ಕ್ಷಣದಲ್ಲಿ, ಅವರ ಸರ್ವಾಂಗಗಳಲ್ಲಿಯೂ ಅದಾವುದೋ ಒಂದು ವಿಚಿತ್ರ ಉತ್ಸಾಹ ಹೊಳಲಿಟ್ಟಿತು. ಮತ್ತೊಂದು ಕ್ಷಣದಲ್ಲಿ, ಆ ಕಾಡುಮೇಡಿನ ದಾರಿಗುಂಟ ಏರುತ್ತ ಇಳಿಯುತ್ತ ಕಣ್ಣಿಗೆ ಮರುಳು ಹಿಡಿಸುವ ವೈಯಾರದಿಂದ ಓಡುತ್ತ, ಒಂದುಕ್ಷಣ ನಿಂತು ಬೆದರುಗಣ್ಣುಗಳಿಂದ ಮಿಂಚು ಬೀರಿ, ಮತ್ತೆ ಓಡುತ್ತಿತ್ತು ಆ ಮಿಗ; ಅದರ ಹಿಂದೆ ಧನುವೇರಿಸಿದ ದುಷ್ಯಂತನಂತೆ ಸ್ವಾಮಿ ಧಾವಿಸುತ್ತಿದ್ದರು, ನಾಗಾ ಲೋಟದ ಕುದುರೆಯ ಮೇಲೆ.

ಕಿವಿಯೆತ್ತಿ ನೋಡುತ ಚಣದಾಗೆ ಚಂಗನೋಡಾಗ
ಬತ್ತಲೆಗುದುರೆಯ–ಸ್ವಾಮಿ ಬ್ಯಾಗ
ಬೆನ್ನಾಗೆ ಬೆರಿಸ್ಯಾರು

ತುಸುದೂರ ನಡೆಯಲಿಲ್ಲ ಈ ಮೇಲಾಟ. ಆ ಚೆಲುವಿನ ಮಿಗದಂತೆ ಈ ಚೆನ್ನಿಗನಿಗೂ ಮೆಯ್ ಎಚ್ಚರದಪ್ಪಿದಂತಾಗಿತ್ತು........ಹರಿದಾರಿ ಹರಿದಾರಿ ಹಿಂದಾಯಿತು. ಪ್ರಾಯಃ, ‘ ಯಾಲಕ್ಕಿ ಕಾನು ’ ಮುಗಿದುಬಂದಿತ್ತು.... ಅಲ್ಲೆ ಒಂದು ಸಣ್ಣ ದಿಬ್ಬ; ದಾರಿಯ ಸೋವು ಹೊರಳಿ ಆ ದಿಬ್ಬವನ್ನು ಬಳಸಿ ಹೋಗುತ್ತದೆ. ಆ ಮುರುವು ತಿರುಗಿದಾಗ ಮಿಗ ಕಣ್ಣು ತಪ್ಪಿತು. ದಿಕ್ಕು ದೆಸೆ ಹಾದಿಸೋವುಗಳನ್ನು ನೋಡದೆ ಸ್ವಾಮಿ ಧಾವಿಸಿದರು.

ದಿಕ್ಕುಮುಕ ನೋಡದೆ ಸ್ವಾಮಿ ಮಿಕ ಬೆನ್ನಟ್ಯಾರು

ಆದರೆ,

ಮಟಮಾಯಾದಂತೆ–ಚಣದಾಗೆ
ಮಿಕವೇ ಕಾಣದು

ಸ್ವಾಮಿಯ ನಿರಾಶೆ ಹೇಳುವುದಲ್ಲ........ಹಾಗೆಯೇ ತುಸು ದೂರ ಮುಂದೆ ಸಾಗಿದರು. ಮುಂದೆ ಕಣ್ಣಂಚಿನವರೆಗೂ ನೇರವಾದ ಸೋವು ; ಒಂದು ದಿಕ್ಕಿನಲ್ಲಿ ಬೋಳು ದಿಬ್ಬ, ಇನ್ನೊಂದೆಡೆ ಕಣಿವೆ. ಅತ್ತ ನೋಡಿದರು ಇತ್ತನೋಡಿದರು, ಮಿಗವಿರಲಿ ಅದು ನಡೆದ ಸುಳಿವೂ ತೋರದು........ ತನ್ನಂತೆಯೇ ಕುದುರೆಯ ಗತಿ ಮಂದವಾಯಿತು.........ಸ್ವಾಮಿ ಮತ್ತೆ ಮತ್ತೆ ಅತ್ತಿತ್ತ ಕಣ್ಣು ಹಾಯಿಸಿದರು....—ಯಾರ ಮಾಯಕ ಇದ್ದೀತು ಇದು? ಮಿಗವೇನು ನೆಲದೊಳಕ್ಕೇ ಆಡಗಿತೋ, ಬಾನಿಗೇ ಜಿಗಿಯಿತೋ? ........ಇದನ್ನು ಬೇಟೆಮಾಡುವ ಆಸೆಯೇನೂ ಇರಲಿಲ್ಲ ಅವರಿಗೆ. ಅದನ್ನೆ ಕುರಿತು ಆಶ್ಚರ್ಯದಿಂದ ಯೋಚಿಸಿದರು : ಹಾಗಿದ್ದರೂ ಅದೇಕೆ ಅಷ್ಟು ಪ್ರಯಾಸದಿಂದ ಅಟ್ಟಿಸಿಕೊಂಡು ಬಂದದ್ದು? ಒಮ್ಮೆ ಅದು ಎದುರಲ್ಲೆ ನಿಂತಿದ್ದರೂ ಅದರ ಮೇಲೆ ಕೋವಿಯೆತ್ತಲು ಅವರಿಂದ ಆಗುತ್ತಿರಲಿಲ್ಲ, ಹಾಗೆಂಬುದು ಸ್ಪಷ್ಟ. ಆದರೂ........ಮಿಗ ಮಾಯವಾಗಲು ಆದೇನೋ ನಲ್ಮೆಯ ಉಡುಗೊರೆಯೊಂದನ್ನು ಕಳೆದುಕೊಂಡಂತೆ ಚಡಪಡಿಕೆ........ —ಏನೆಲ್ಲ ಆಯಿತು! ಬಿಟ್ಟುಬಂದ ಆಳುಗಳು : ಅವರನ್ನು ಕುರಿತು ನೆನೆದಾಗ ಕಳೆದ ಯಾವುದೋ ಕುತ್ತವನ್ನು ಮತ್ತೆ ನೆನೆಸಿದಂತಾಗಿ, ಆ ಯೋಚನೆಯನ್ನೆ ಆಚೆ ತಳ್ಳಿಬಿಟ್ಟರು. ಕನಸಿನಂತೆ ಅದೃಶ್ಯವಾದ ಆ ಸವಿಯನ್ನೆ ಮತ್ತೆ ಮೆಯ್‌ದುಂಬಿಸಿಕೊಳ್ಳುತ್ತ ಕಣ್ಣು ಅರೆ ಮುಚ್ಚಿ ಚಿತ್ತವನ್ನು ಕುಡಿಮರಳಿಸಿದರು........ಕಣ್ಣಿನ ನೇರವನ್ನೆ ನೋಡುತ್ತ ಮಂದಗತಿಯಲ್ಲಿ ಕುದುರೆ ಸಾಗುತ್ತಿರಲು ಸ್ವಾಮಿ, ಅರೆಗಣ್ಣಿನ ಮುಸುಕಿನಲ್ಲಿ ಸಂಪತ್ಸಂಧ್ಯೆಯ ಚಿತ್ರಸ್ವಪ್ನದಲ್ಲಿ ಲೀನವಾಗಿಹೋಗಿದ್ದರು........

ಮಿಕವೇ ಕಾಣದು ಮಾಯಕವಂತ ಮುಂದೆ ನಡೆದರು

ನಿಜ, ಮಿಕ ಕಾಣದಿದ್ದರೂ ಸ್ವಾಮಿ ತಮ್ಮ ಎವೆಮುಸುಕಿನೊಳಗೇ ಈ ಎಲ್ಲ ನಡೆಸಿದ ಮಾಯಕವನ್ನು ಕಾಣುತ್ತಿದ್ದರು....ಮತ್ತೆ ಅವರು ಎವೆದೆರೆದಾಗ,

ಅಲ್ಲೊಂದು ಕೆರೆಯು ಕಂಡರು

ಎವೆ ಬಿಚ್ಚಿರುವೆನೋ ಮುಚ್ಚಿಯೇ ಇರುವೆನೋ ಎಂದು ಸಂದೇಹವಾಗಿರಬೇಕು ಅವರಿಗೆ: ಇದೇನು ಎದುರಿನಲ್ಲಿ ಕಾಣುತ್ತಿರುವುದು? ಈ ಕಾಡುನಾಡಿನಲ್ಲಿ ಇಂಥ ಕೆರೆ!

ಅಂಬಾರ ಹರಹಿನ ರನ್ನದ ಕನ್ನಡಿ ನೀರಿನ
ಬಂಗಾರ ಮಿಾನಿನ-ಸ್ವಾಮಿಯೊಂದು
ಕೆರೆಯು ಕಂಡರು

—ಯಾವ ಮಾಯಕವೂ ಅಲ್ಲ, ಎಲ್ಲವೂ ವಾಸ್ತವವಾಗಿ ನಡೆದದ್ದು ಎಂದು ನಿಶ್ಚಯ ಮಾಡಿಕೊಂಡರು ಸ್ವಾಮಿ. ಹಾಗೆ ಯೋಚಿಸುತ್ತ ಹೋದರೆ ಎಲ್ಲ ಮತ್ತುಮತ್ತೂ ಮಾಯಕವಾಗಿ ಕಂಡೀತು, ಹುಚ್ಚು ಹಿಡಿದೀತು. ಒಮ್ಮೆ ಕಣ್ಣು ಅರೆಮುಚ್ಚಿ ಕರಗಿಹೋಗಿದ್ದವರು ಮತ್ತೆ ಪ್ರಕೃತಿಸ್ಥರಾದರು. ಇವೆಲ್ಲ ವಾಸ್ತವವೆಂಬ ನಿರ್ಧಾರ ಬಂದೊಡನೆಯೆ ಅವರಿಗೆ ಇಷ್ಟುಹೊತ್ತಿನ ಭಾರ ಬಿಗುಕಳೆದಂತೆ ತೋರಿತು. ಇಂದು ಅನಿರೀಕ್ಷಿತವಾಗಿ ಒದಗಿದ ಹೊಸ ಸವಿಗೆ ಕನಸಿನ ತೆಳುಪು ಹೋಗಿ ಮೂರ್ತಸ್ವರೂಪ ಬಂದಂತಾಯಿತು. ಅಲ್ಲೆ ಕುದುರೆ ನಿಲ್ಲಿಸಿ ಕೆಳಗಿಳಿದರು. ಕೆರೆಯ ದಂಡೆಯ ಮೇಲೆ ಹೋಗಿ ಕುಳ್ಳಿರುವ ಮನಸ್ಸಾಯಿತು. ಕುದುರೆಯನ್ನು ಅಲ್ಲೆ ಬಿಟ್ಟು ದಂಡೆಯತ್ತ ನಡೆದರು....ಎಲ!....

ಸ್ವಾಮಿ ಬರುವ ಸುಳುವ ಕಂಡು
ನೀರ ಮಿಾಯೋಳು—ಚೆನ್ನಿ
ಸೀರೆನುಡುವಳು—ಬ್ಯಾಬ್ಯಾಗ
ಕುಪ್ಪುಸ ತೊಡುವಳು

—ಅಚ್ಚರಿಯ ಮೇಲೆ ಅಚ್ಚರಿಯ ಔತಣ! ಮಾಯಕದ ಮೇಲೆ ಮಾಯಕ! ........ಮುಂಗಾಣದ ಹಾದಿಯಲ್ಲಿ ಮೇಲೆ ಮೇಲೆ ಎರಗಿ ಬಂದ ಇಂಥ ಮಾಯಕವನ್ನು ಕಂಡು ಕಣ್ಣು ಮತ್ತೆ ಎಲ್ಲಾದರೂ ಮುಗಿದುಬಿಟ್ಟೀತೆಂದು ಯತ್ನಪೂರ್ವಕವಾಗಿ ಎಚ್ಚೆತ್ತುಕೊಂಡರು ಸ್ವಾಮಿ. ಮತ್ತೆ ಕನಸಿನ ಚಪ್ಪಡಿಯಡಿಯಲ್ಲೆ ಚಿತ್ತ ಕುಡಿಕುಡಿಯೊಡೆದು ನಲುಗದಂತೆ ಧೈರ್ಯ ತಂದುಕೊಂಡು, ಆ ಚೆನ್ನಿಯತ್ತ ಸಾಗಿದರು........ಆಕೆಯ ಹೆಸರು ಚೆನ್ನಿ. ಆದಲ್ಲದೆ ಬೇರೆ ಹೆಸರು ಒಪ್ಪದಂಥ ರೂಪು. ಎದುರಿನ ಕೆರೆಯಂತೆಯೇ

ತುಂಬಿ ಚೆಲ್ಲೀತೆಂಬ ಹರಯ....ಆಗ ತಾನೆ ಮಿಂದು ಹೊಚ್ಚ ಹೊಸತಾದ ತುಂಬು ದೇಹಕ್ಕೆ ಬೇಗ ಬೇಗ ಸೀರೆ ಸುತ್ತಿಕೊಂಡು ಕುಪ್ಪಸ ತೊಟ್ಟಿದ್ದಳು. ಅದಕ್ಕೆ ಮೊದಲೇ, ಸ್ವಾಮಿ ಬರುವ ಸುಳಿವನ್ನು ಕಂಡಿದ್ದರೂ ಅಳುಕಿಲ್ಲದೆ ನಿಂತಿದ್ದವಳು ಅವರು ಬಳಿಗೆ ಹೋದಾಗ ಒಮ್ಮೆ ಅವರತ್ತ ತನ್ನ ತುಂಬು ಗಣ್ಣು ಚೆಲ್ಲಿ ಮತ್ತೆ ತನಗೆ ತಾನಾದಳು....ಆಕೆ ನೋಡಿದಾಗ ಸ್ವಾಮಿಗೆ 'ಲಕಲಕ' ಕಣ್ಣಿನ ಆ ಮಾಯಕದ ಮಿಗದ ನೆನಪು ಬಂದಿರಬೇಕು; ಮಿದುವಾದ ನಗುವೊಂದು ಮೀಸೆಯ ಕುಡಿಯನ್ನು ಅಲುಗಿಸಿ ಹೋಯಿತು. ಇನ್ನೂ ಸಮೀಪ ಹೋದರು. ಅಳುಕಿಲ್ಲದೆ ಅವಳನ್ನೇ ಕೇಳಿದರು:

ನೀರಿಗಂತ ಬಂದೇವಿಲ್ಲಿ ನೀರ ಮಿಾಯೋಳೆ
ನೀರ ಮಿಾಯೋಳ—ನಮುಗೀಟು
ನೀರ ಕೊಡು ಬಾರೆ

ಆಕೆ ತಿರುಗಿದಳು. ಅರಳಿದ ತುಂಟುಗಣ್ಣುಗಳನ್ನೂ ಕಚಗುಳಿಯಿಡುವಂತೆ ತೋರುವ ಮೀಸೆಯ ಕುಡಿಗಳನ್ನೂ ಕಂಡಾಗ ಬಿಗಿಹಿಡಿದಿದ್ದ ಆಕೆಯ ತುಟಿ ತಂತಾನೆ ಅರಳಿಬಿಟ್ಟವು. ಮತ್ತೆ ಮುನಿದವಳಂತೆ ಮುಖ ಒಪ್ಪಮಾಡಿ ಕೊಂಡು ತಿರುಗಿದಳು; ಅತ್ತಣಿಂದಲೇ ಉತ್ತರಿಸಿದಳು:

ನೀರಿಗಂತ ಬಂದರೆ ನೀರು ಕೆರೆಯ ತುಂಬೈತೆ

—ಮಗುವಿನಂತೆ ದೊಡ್ಡದಾಗಿ ನಕ್ಕುಬಿಟ್ಟರು ಸ್ವಾಮಿ. ಇವರ ನಗು ಕೇಳಿ ಮೊಗಬಿಗಿದು ತಿರುಗಿದ ಚೆನ್ನಿ ಮತ್ತೆ ಸೋತಳು....ಸಲುಗೆಯಿಂದ ಸೆರೆವಿಡಿಯುವಂತೆ ಹೇಳಿದರು ಸ್ವಾಮಿ:

ಕೆರೆಯ ತುಂಬಿದ್ದ ನೀರಿಗೆ ಕೊಡುವ ತರಲಿಲ್ಲೇ
ಕೊಡವ ತಂದೋಳೆ—ನಮುಗೀಟು
ನೀರ ಕೊಡಬಾರೆ

ತನಗೆ ತೀರ ಹತ್ತಿರದ ಹಿರಿಯನೊಬ್ಬನಂತೆ, ಆಜ್ಞೆಮಾಡುವವನಂತೆ ಅಳು ಕಿಲ್ಲದೆ ಹೇಳುತ್ತಾರೆ; ಅಷ್ಟಾದರೂ ಮಾತಿನಲ್ಲಿ ಅದೊಂದು ಬಗೆಯ ಮಿದು. ....—ಮೊದಲು ತುಸು ದೂರದಲ್ಲಿ ಸ್ವಾಮಿಯನ್ನು ಕಂಡಾಗ ಹೆಮ್ಮೆಯ ಉಲ್ಲಾಸ ತೋರಿತ್ತು ತನಗೆ; ಈಗ ಆ ಹೆಮ್ಮೆ ಸೋತು ಮತ್ತೊಂದು ಬಗೆಯ ಉಲ್ಲಾಸ ಹೊಳಲಿಟ್ಟಿದೆ....ಈ ಬಾರಿ ಚೆನ್ನಿ ಮುಖ ಬಿಗಿಗೊಳಿಸ ಲಿಲ್ಲ. ಬಿಗಿಮಾಡಿಕೊಂಡರೆ ತೀರ ಸೋತುಬಿಟ್ಟೇನೆಂದು ಪ್ರಸನ್ನಳಾಗಿ

ಕೊಡದಲ್ಲಿ ನೀರು ತಂದು ಎರೆದಳು. ಚೆನ್ನಿ ಕಣ್ಣಿಗೆ ಜೇನೆರೆಯುತ್ತಿರಲು ಸ್ವಾಮಿ ಸಾವಧಾನವಾಗಿ ತಮ್ಮ ನೀರಡಿಕೆ ಹಿಂಗಿಸಿಕೊಂಡರು........ಮತ್ತೆ ಆಕೆ ನಡೆದಳು. ಒದ್ದೆಯಾದ ವಸ್ತ್ರಗಳನ್ನು ಕೊಂಡು ತುಸು ದೂರದಲ್ಲಿ ಹರವಿ, ಪುಷ್ಪವತಿಯಾಗಿ ಬಗೆವೊಗುವಂತಿದ್ದ ಬದಿಯ ಗಿಡವೊಂದರ ಅಡಿಯಲ್ಲಿ ಕುಳಿತಳು........ಸ್ವಾಮಿ ಇಲ್ಲೇ ಕಾಲುಚಾಚಿ ಕುಳಿತರು; ಮತ್ತೊಮ್ಮೆ ಅತ್ತ ತಿರುಗಿ ಕಣ್ಣು ತುಂಬಿಸಿಕೊಂಡು ಅರೆಮುಚ್ಚಿದರು.

ಚಂದ್ರಾಪೀಡನ ಜೈತ್ರಯಾತ್ರೆಯನ್ನು ಮರಳಿಸಿದ್ದರು ಸ್ವಾಮಿ.

....ಸ್ವಾಮಿ ಪುನಃಪುನಃ ಯೋಚಿಸುತ್ತಿದ್ದರು: ವಿಧಿಯೇ ತನ್ನನ್ನು ಇಲ್ಲಿಗೆ—ಬೇಡ ಎಂದರೆ ಬಲತ್ಕಾರವಾಗಿ—ಸೆಳೆದು ತಂದಿತು........ಎಂಥ ಚೆಲುವೆ ಅನಾಯಾಸವಾಗಿ ದೊರೆತಳು!....—ದೊರೆತಳು ಎನ್ನುತ್ತಿದ್ದೇನಲ್ಲ, ಅವಳೇನು ನನ್ನ ಕೈ ಹಿಡಿದುಬಿಟ್ಟಳೆ? ಯಾರೋ, ಎಲ್ಲಿಯವಳೋ. ಎಂಥ ಹುಚ್ಚು ನನ್ನದು!....ಸಲುಗೆಯಿಂದ ಮಾತನಾಡಿದೆ. ಅದು ಹೊಸದಲ್ಲ. ಲಹರಿ ಬಂದಿತೆಂದರೆ, ಹರಯದ ಹೆಣ್ಣುಗಳೊಡನೆ ಹಿಂದೆ ಎಷ್ಟು ಬಾರಿ ಸಲುಗೆಯಿಂದ ಮಾತನಾಡಿಲ್ಲ?....—ಆದರೆ ಆಗ ಹೊರಗೆ ಸಲುಗೆ ಇದ್ದರೂ ಒಳಗೆ ಅದಾವುದೋ ಒಂದು ಬಗೆಯ ಕಟ್ಟು ಇರುತ್ತಿತ್ತು. ಮಾತುಮಾತಿಗೂ ಅದು ಒಳಗಿನಿಂದ ಅಮುಕುತ್ತಿದ್ದುದು ಸ್ಪಷ್ಟವಾಗಿ ತಿಳಿಯುತ್ತಿತ್ತು. ಇಂದು ಮಾತ್ರ ಅದೇನೋ ಹೊಸ ಹಗುರು ಬಂದುಬಿಟ್ಟಿದೆ!........—ಯೋಚನೆಯಿಂದ ಎಚ್ಚೆತ್ತರು ಸ್ವಾಮಿ. ಮುಖದಲ್ಲಿ ಗೆಲುವು ತುಂಬಿಕೊಂಡು ಅತ್ತ ತಿರುಗಿದರು....ಚೆನ್ನಿ ನಾಲ್ಕು ಕಲ್ಲುಗಳನ್ನೆತ್ತಿಕೊಂಡು ಆಡುತ್ತಿದ್ದಳು; ಪ್ರಾಯಃ, ಆಡುವಂತೆ ನಟಿಸುತ್ತಿದ್ದಳು. ಇಷ್ಟು ಹೊತ್ತು ಆಕೆ ತನ್ನನ್ನೇ ನೋಡುತ್ತಿದ್ದಿರಬೇಕು. ಇಲ್ಲದಿದ್ದರೆ, ತಾನು ತಿರುಗಿದಾಗ ಇತ್ತ ನೋಡುತ್ತಿದ್ದವಳು ಅದೇಕೆ ಫಕ್ಕನೆ ಕಣ್ಣು ಹೊರಳಿಸಬೇಕು, ತನಗೆ ತಾನೇ ಅಪಮಾನಿತಳಾದಂತೆ? ಅದೂ ಆಕೆಗೆ ಅರ್ಥವಾಗಿರಬೇಕು, ಈಗ ಮುಗುಳು ನಗುತ್ತಿದ್ದಾಳೆ, ತನ್ನ ಪೇಚನ್ನು ಕಂಡು ತನಗೆ ತಾನೇ ಪರಿಹಾಸ ಮಾಡಿಕೊಳ್ಳುವವಳಂತೆ!....ಮತ್ತೆ ಆಕೆ ಕಲ್ಲು ಆಟದ ಹೆಳೆಗೆ ತೊಡಗಿದಾಗ ಸ್ವಾಮಿ ಅಲ್ಲಿಗೇ ನಡೆದರು....ಆಕೆಯ ಕಣ್ಣುಗಳಲ್ಲೂ ತುಂಟು ಕುಣಿಯುತ್ತಿತ್ತು, 'ಏನು ಬೇಕಿದ್ದಿತೋ' ಎಂದು

ಪರಿಹಾಸಗೊಳಿಸುವಂತೆ. ಅವಳ ಎದುರಿನಲ್ಲಿ ತಾವೂ ಅಣಿಯಾಗಿ ಒಪ್ಪವಾಗಿ ಕುಳಿತು ಹೇಳಿದರು ಸ್ವಾಮಿ:

ಎಕ್ಕೆ ಮರನಡಿಗೆ ಎತ್ತುಗಲ್ಲಾಡೋಳೆ
ಎತ್ತುಗಲ್ಲಾಡೋಳೆ—ನಮಕೂಡ
ಎತ್ತುಗಲ್ಲಾಡು ಬಾರೆ

—ಇಂಥ ಎಡೆ ಇಂಥ ಸಂದರ್ಭದಲ್ಲಿ ಇಂಥ ವೇಳೆಯಲ್ಲೂ 'ಈತನ' ಕೂಡ ಎತ್ತುಗಲ್ಲು ಆಡುವುದಾದರೆ ಅದೇನೂ ಅನುಚಿತವಲ್ಲ....—ಏನೋ ಸ್ವಾರಸ್ಯವಿದೆ, ಅಂಗಳಕ್ಕೆ ಬಂದವ ಹೊಸತಿಲಿಗೇ ಬಂದಿದ್ದಾನೆ....ಆಡಲೊಲ್ಲೆ ಎಂದರೆ ಬಿಟ್ಟಾನೆಯೆ? ತನ್ನ ಸಲುಗೆಯ ಮಿದುವನ್ನೆ ಆಣೆಮಾಡಿ ಆಡಿಸಿ ಬಿಟ್ಟಾನು....—ಅಂತೆಯೇ ಆಕೆ ಒಲ್ಲೆ ಎನ್ನಲಿಲ್ಲ. ಆದರೆ, ತನ್ನಂಥವಳ ಕೂಡ ಆಡುವುದು ಬೇಕಿದ್ದರೆ ಅದಕ್ಕಾಗಿಯೇ ಹಸಿದು ಹಂಬಲಿಸಿ ಬರಬೇಕು —ಅದೊಂದು ಚಂದ. ಅದು ಬಿಟ್ಟು ಯಾತಕ್ಕೋ ಬಂದವನು, ಏನೋ ಹೊತ್ತು ಕಳೆಯಲು ಒಂದು ಹೆಳೆಯೆನ್ನುವಂತೆ ಆಡೋಣ ಬಾ ಎಂದರೆ?

ಬ್ಯಾಟೆಗಂತ ಬಂದೋರೆಮಕೂಡಾಟ ನಿಮಗ್ಯಾಕೆ

ಎಂದು ಸ್ಪಷ್ಟವಾಗಿ ಅಂದೇಬಿಟ್ಟಳು ಚೆನ್ನಿ....—ಬೇಟೆಗೆ ಬಂದುದು ನಿಜ. ಅದರ ಸುದ್ದಿ ಏಕೆ? ಈಗ ಬಂದುದು ಈಕೆಯ ಕೂಡ ಆಟಕ್ಕೇ ಅಲ್ಲವೆ?

ಬ್ಯಾಟೆಗೆ ಬಂದೋರಿಗ ನಿಮಕೂಡಾಟಕೆ ಬಂದೇವೇ
ಆಟಕೆ ಬಂದೇವೆ—ನಮಕೂಡ
ಎತ್ತುಗಲ್ಲಾಡು ಬಾರೆ

ಹಾಗೆಂದರು ಸ್ವಾಮಿ. 'ನಿಮ್ಮ ಕೂಡ ಆಟಕ್ಕೆ ಬಂದೆವು' ಎಂಬ ಮಾತಿನಲ್ಲೆ 'ನಿಮ್ಮ ಕೂಡಾಟಕ್ಕೆ ಬಂದೆವು' ಎಂಬುದನ್ನು ಕಣ್ಣಿನ ಕುಡಿಯ ಕೊಂಕಿನಲ್ಲಿ ಸ್ವರದ ಸೋಂಕಿನಲ್ಲಿ ಸೂಚಿಸಿ ಒಳಗೇ ನಕ್ಕರು.... ಅದೊಂದು ಮಾತಿನಲ್ಲಿ, ಒಂದು ಚಣ ಹರಯದ ಬಯಕೆಯಲ್ಲ ಬೃಹದಾಕಾರವಾಗಿ ಬೆಳೆದು ಹಸಿಹಸಿವು ಹಣ್ಣಾಗಿಬಿಡುವ ಅದ್ಭುತಪ್ರಿಯವನ್ನು ಅನುಭವಿಸಿಬಿಟ್ಟಳು ಚೆನ್ನಿ, ಕಂಪಿಸಿಬಿಟ್ಟಳು. ಕಣ್ಣು ಏನೆಲ್ಲವನ್ನೋ ಹೊಳೆಸಿ ಸೋತಂತೆ ನೆಲಕ್ಕಿಳಿದುಬಿಟ್ಟಿತು....ಅವಳಲ್ಲಿ ಹೊನಲ್ವರಿದುದೆಲ್ಲವನ್ನೂ ಸ್ವಾಮಿ ತಮ್ಮ ನಾಡಿಗಳಲ್ಲಿ ಅದೇ ಬಿಸಿಯಲ್ಲೆ ಅನುಭವಿಸಿದರು.

ಆ ಮದವನ್ನು ಗುಟುಕರಿಸಲು ತುಸು ಮೌನವೇ ಬೇಕಾಯಿತು....—ಜಾಣೆ, ಬಹುಬೇಗ ಚೇತರಿಸಿಕೊಂಡುಬಿಟ್ಟಳು. ಹಳ್ಳಿಯ ಹೆಣ್ಣಿನ ಹರಯದ ದಿಟ್ಟತನಕ್ಕೆ ಅದೊಂದು ಕಷ್ಟವಾಗಲಿಲ್ಲ.

....ತನ್ನ ಕೂಡ ಎತ್ತುಗಲ್ಲಾಟಕ್ಕೆ ಬರುತ್ತಾನಂತೆ. ಬಿಟ್ಟ ಆಡುವುದಿದ್ದರೆ ಇಂಥವರು ಎಷ್ಟು ಜನರೋ!....ಒಳಿತು. ಸೋಲಕ್ಕೆ ಏನು ಪಣ ಇಟ್ಟಾರು?

ಎತ್ತುಗಲ್ಲಾಡೇವು ಸೋತರೆ ಯಾತರನಿಟ್ಟೇರಿ

ಕೂಡ ಆಟ, ಕೂಡಾಟ ಮುಖ್ಯವಲ್ಲದೆ ಪಣ ಯಾತರ ಮಾತು?

ಯಾತರನಿಟ್ಟೇವು ಎದೆಯ ಪದಕ ಕೊಟ್ಟೇವು
ಪದಕ ಕೊಟ್ಟೇವು—ಬಂಗಾರ
ಬದುಕನಿಟ್ಟೇವು

ಸೋಲಕ್ಕೆ ಏನು ಬೇಕಿದ್ದರೆ ಅದನ್ನೆ ಕೊಟ್ಟೇವು! ಅದಾವ ಮಾತು? ಎದೆಯಮೇಲೆ ತೊಟ್ಟ ಪದಕ ಮಾತ್ರವಲ್ಲ, ಪದಕದಂಥ ಎದೆಯನ್ನೇ ಕೊಟ್ಟೇವು! ಬಂಗಾರದಲ್ಲಿ ಮಾಡಿದ್ದು—ಬಂಗಾರದ ಬದುಕು—ಅಂಥ ಒಡವೆ ಕೊಟ್ಟೇವು; ಹಾಗೆ ಕೊಡುವಲ್ಲಿ ಬಂಗಾರದಂಥ ನಮ್ಮ ಬದುಕನ್ನೇ ಧಾರೆಯೆರೆದೇವು—ಎಂದರು ಸ್ವಾಮಿ....ಆಟ ತೊಡಗಿಯಾಯಿತು. ಕಣ್ಣುಗಳು ಚಿಮ್ಮಿ ಕುಣಿದು ಕುಳಿತು ಸವಿ ಮಿಗಿಸಿರಲು, ಅನಂತರ ಕಲ್ಲುಗಳು ಚಿಮ್ಮಿ ಕುಣಿದು ಕುಳ್ಳಿರುತ್ತಿದ್ದವು. ನೊರೆಯೆದೆಯ ಕಿಲಕಿಲ ನಗು ಕೆರೆಯ ಅಲೆಯಲೆಗಳ ಕೂಡ ಆಟವಾಡುತ್ತಿದ್ದವು........ಎಷ್ಟು ಸಾವಕಾಶ ಗೊಳಿಸಿದರೂ ಆಟ ಮುಗಿದೇಹೋಯಿತು. ಸ್ವಾಮಿ ಆಟದಲ್ಲಿ ಸಂಪೂರ್ಣ ಸೋತು ಹಗುರಗೊಂಡಂತೆ ನಕ್ಕಾಗ, ಚೆನ್ನಿ ತಾನೀಗ ಸಂಪೂರ್ಣ ಸೋತೆನೆಂದು ಅರಿತಳು. ಆ ಸೋಲಿನ ಸವಿಗೆ ಹಾತೊರೆದು ಪಣ ಕೇಳಿದಳು:

ಪದಕ ಕೊಡುತೀರೋ ಬಂಗಾರ ಬದುಕನಿಡುತೀರೋ

—ಯಾವುದಾದರೂ ಸರಿ, ಆಕೆ ಮೆಚ್ಚಿದ್ದು. ಬೇಡ, ಎರಡೂ ಕೊಳ್ಳಲಿ. ಒಂದು ಕೊಂಡು ಮತ್ತೊಂದು ಬಿಡುವುದಾದರೂ ಹೇಗೆ, ಒಂದಕ್ಕೊಂದಕ್ಕೆ ಅಷ್ಟು ಹೊಂದಿಕೆಯಿರುವಾಗ?....ಗೆದ್ದವಳು ಪಣವನ್ನು ಕೇಳಿ ಕೊಳ್ಳುವುದು

ಸೌಜನ್ಯವಲ್ಲ. ಸೋತವ ಪಣ ಮುಟ್ಟಿಸುವುದು ಸಮ. ಹಾಗೆ ತಾನೇ ಪಣ ಕೊಡುವುದಾದರೆ... ಒಂದು ಮಾತು :

ಪದಕ ತೊಡಿಸೇವು ಅದುಕೂಡ ಬಂಗಾರನಿಡಿಸೇವು
ಬಂಗಾರನಿಡಿಸೇವು—ಸಿಂಗಾರಿ
ಕುಲವ್ಯಾತರದ್ಹೇಳೆ

—ಸೋತೆವೆಂದು ಶರಣುಹೊಡೆದು ಕೊರಳುಮುಟ್ಟಿ ಬಂಗಾರವಿಟ್ಟು, ಎದೆ ಮುಟ್ಟಿ ಪದಕ ತೊಡಿಸುತ್ತೇವೆ. ಆದರೆ, ಕುಲ ಯಾವುದು ತಿಳಿಯದೆ ಪಣ ಒಪ್ಪಿಸುವುದು ಹೇಗೆ?

ಕುಲ ಕೇಳುವವರೆಗೆ ಬಂದಿತಾದರೂ ಆ ದಿಟ್ಟೆ ಅಳುಕಲಿಲ್ಲ.

ಕುಲವ ಹೊಗಳೋರು ಊರಾಗೆ ಒಕ್ಕಲೈದಾರೆ

—ಹೆಸರಾದ ತನ್ನ ಕುಲವನ್ನು ತಾನೇ ಹೊಗಳಿಕೊಳ್ಳಬೇಕೇಕೆ? ನೂರು ಒಕ್ಕಲಿರುವ ನಾಡಗೌಡರ ಆ ಕುಲವನ್ನು ಊರಲ್ಲಿ ಎಲ್ಲ ಹಾಡಿ ಹೊಗಳುತ್ತಾರೆ.......ತನ್ನ ದಿಟ್ಟತನ ಮೆರೆಸಿದಳಾದರೂ ಸ್ವಾಮಿ ಕೇಳಿದ ಪ್ರಶ್ನೆಗೆ ಸರಿಯಾಗಿಯೇ ಉತ್ತರಿಸಿದಳು....ಆದರೆ, ಇನ್ನೊಂದೇ ಒಂದು :

ಪದಕನಿಡಿಸೇವು ಅದುಕೂಡ ಬಂಗಾರ ತೊಡಿಸೇವು
ಬಂಗಾರ ತೊಡಿಸೇವು—ಸಿಂಗಾರಿ
ಹೆಸರಾವುದು ಹೇಳೆ

ಹೆಸರು ಹೇಳಿಯಾಳು, ಹೆಸರು ಹೇಳಿ ಪಣ ಒಪ್ಪಿಸಿಕೊಂಡಾಳು; ಆದರೆ ಮೊದಲಿಗೆ ತನ್ನ ಹಿರಿಯರು ಹೆಸರು ಹೇಳಬೇಕು........ಪಣ ಬರುವುದು ತಡವಾದರೂ ಸರಿ; ಹೆಸರು ಹಿರಿಯರಿಂದಲೇ ಬಂದರೆ ಚಂದ.

ಹೆಸರು ಹೇಳೋರು ಮನೆಯಾಗೆ ಹಿರಿಯೋರೈದಾರೆ

ಈ ಮಾತೇ ಅರ್ಥವಾಗಿತ್ತು ಸ್ವಾಮಿಗೆ; ಅದನ್ನು ಸ್ಪಷ್ಟಗೊಳಿಸಿತು ಚೆನ್ನಿಯ ನೆಲವುಳುವ ಕಣ್ಣು....—ಪಣ ಕೊಡುಕೊಳ್ಳುವುದು ತುಸು ತಡವಾದರಾಗಲಿ. ಆದರೆ ಈಗ ಹೂವಿಗೆ ಬದಲು ಹೂವಿನ ಎಸಳಾದರೂ ಕೊಟ್ಟು ಕೊಂಡು ಮುಂದಿನಪಕ್ಕೆ ಒಂದು ಭರವಸೆ ಉಂಟುಮಾಡಬೇಕಲ್ಲವೆ?

....ಮುಂದಿನ ಕಥೆ ರಸಿಕರು ತಾವೇ ಕಣ್ಣುಮುಚ್ಚಿ ಕಂಡುಕೊಳ್ಳ ಬಲ್ಲರು.

....ಆ ದಿನ ವಸ್ತ್ರ ಒಣಗುವುದು ತುಂಬ ತಡವಾಯಿತೇನೋ. ಚೆನ್ನಿ ಎಂದಿಗಿಂತ ಎರಡು ತಾಸು ತಡವಾಗಿ ಮನೆ ಸೇರಿದಳು. ಮೂರನೆಯ ದಿನ ಬದಿನಾಡಿನ ಅರಸರ ಮನೆವಾರ್ತೆಯವರು ಚೆನ್ನಿಯ ಮನೆಯನ್ನು ಹೊಕ್ಕು ಹೊರಡುತ್ತಿದ್ದರು. ಮುಂದಿನ ದಿನ ಚೆನ್ನಿಯ ತಂದೆ ಅರಸರ ಮನೆಯ ಔತಣ ಸವಿದ. ಎಂಟು ದಿನ ಕಳೆಯುವುದರಲ್ಲಿ, ಚೆನ್ನಿ ಏಳು ಪ್ಪರಿಗೆಯ ಮೇಲುಪ್ಪರಿಗೆಯಲ್ಲಿ ಪಟ್ಟ ಏರಿಯಾಗಿತ್ತು.

ಈಗ ನಾಡಿನ ಜನ, ಅಂತೂ ಯೋಗ ಒದಗಿತು ಎಂದು ತಮ್ಮ ತಾಳ್ಮೆಯನ್ನು ತಾವೇ ಹೊಗಳಿಕೊಳ್ಳುತ್ತಿದ್ದಾರೆ.

ಈಗ ಸ್ವಾಮಿಯ ದಿನಚರಿ :

ಜಾವ ಹರಿವಾಗೆದ್ದರು ಸ್ವಾಮಿಯೊಂದು
ಜಳಕ ಮಾಡ್ಯಾರು—ಸ್ವಾಮಿಯೊಂದು
ತಿಲಕ ತೀಡ್ಯಾರು
ಅಂಬಾರ ಬಣ್ಣದ ಸ್ವಾಮಿಯೊಂದು
ಪಟ್ಟೆನುಡುವರು—ಮ್ಯಾಲೊಂದು
ನ್ಯಾವಳ ಬಿಡುವರು
ಜರತರ ಹಳಕಿನ ಸ್ವಾಮಿಯೊಂದು
ಕವಚ ತೊಡುವರು—ಮ್ಯಾಲೊಂದು
ಪದಕನಿಡುವರು
ಪದುಮ ಕಟ್ಟದ ಸ್ವಾಮಿಯೊಂದು
ಉಂಗುರವಿಡುವರು—ಕೊರಳಾಗೆ
ಬಂಗಾರ ತೊಡುವರು
ಮೂವತ್ತು ಮುಲಕಿನ ಸ್ವಾಮಿಯೊಂದು
ಮುಂಡಾಸು ಬಿಗಿವರು—ಮ್ಯಾಲೊಂದು
ಚೆಂಡ್ಹೂ ಮುಡಿವರು

ಕನ್ನಡಿ ಮಾತ್ರ ಈಗ ಸದಾ ತೆರವಾಗಿರುತ್ತದೆ. ಸಿಂಗಾರ ಮುಗಿದ ಮೇಲೆ ಸ್ವಾಮಿ,

ಏಳುಪ್ಪರಿಗೆಯ ಮ್ಯಾಲುಪ್ಪರಿಗೇಲಿ
ಮಡದಿಯ ಕೂಡ್ಯಾರು

—ಎಷ್ಟೋ ಹೊತ್ತಿನ ಬಳಿಕ, ದಾಳಗಳ ಸದ್ದಿನ ಕೂಡ ಕಿಲಕಿಲ ನಗು ಹೊಳಲಿಡಲಾರಂಭವಾಗುತ್ತದೆ; ಮೇಲುಪ್ಪರಿಗೆಯಿಂದ ಬಂದು ಏಳುಪ್ಪರಿಗೆಗಳನ್ನು ತುಂಬಿ ಸೂಸುತ್ತದೆ.

ಮಡದಿಯ ಕೂಡ್ಯಾರು—ಸ್ವಾಮಿಯೊಂದು
ಪಗಡೆನಾಡ್ಯಾರು

ಊಳಿಗದವರು ಒಬ್ಬರೊಬ್ಬರ ಮುಖ ನೋಡಿ ನಸುನಗುತ್ತಾರೆ.
....ಅದಾದ ಮೇಲೆ ಸ್ವಾಮಿ ಮತ್ತೆಂದೂ ಬೇಟೆಗೆ ಹೊರಡಲಿಲ್ಲ.



## ೯. ಸೊಬಗಿಲೊಲೆಯುತ ಬಾರೊ ಸೊಬಗಿನ ಚಿಂತಾಮಣಿಯೆ

ಇನ್ನೇನು ಸ್ವಲ್ಪ ಹೊತ್ತಿನಲ್ಲಿ ಕಹಳೆ ಮೊಳಗುತ್ತದೆ; ವಾದ್ಯಗಳು ಭೋರ್ಗರೆಯುತ್ತವೆ! ........

ಸಾಲುಸಾಲಾಗಿ ತೆರೆಮಾಲೆಯಂತೆ ಹಬ್ಬಿ ಮೆರೆಯುವ ಹಸಿರು ಬೆಟ್ಟಗಳ ಮುಡಿಯೊಂದರಲ್ಲಿ ಮಾಣಿಕ್ಯದ ಚೆಂಡಿನಂತೆ ಉರಿಯುವ ಸೂರ್ಯ ಮೆಲ್ಲ ಮೆಲ್ಲನೆ ಕೆಳಗಿಳಿಯುತ್ತಿದ್ದಾನೆ. ನಡುವೆ ನೆರಳಿನಲ್ಲಿ ಮೆಯ್‌ಚಾಚಿದ ಕಣಿವೆಗಳೋ—ಅಲ್ಲಿ ಚೆಲುವು ಹಸಿರಾಗಿ ಹರಿದಂತೆ ಕಂಪಾಗಿ ಸರಿದಂತೆ ತೋರುತ್ತಿದೆ. ಅಂತಹ ಕಂಪಿನ ಕಣಿವೆಯೊಂದರಲ್ಲಿ ಊರು. ಊರೆಂದರೆ ನಾಲ್ಕೇ ಮನೆಗಳು........ಹಿಂದೆ, ತಲೆಯೆತ್ತಿ ನೋಡಿದರೆ ಅಭೋ ಎನ್ನಿಸುವ ಬೆಟ್ಟ; ಮುಂದೆ, ಪಾತಾಳ ಪ್ರಪಾತವನ್ನು ತುಂಬಿ ನಿಂತ ಅಡಿಕೆಯ ತೋಟ; ನಡುವೆ ಮನೆ. ಎಲ್ಲೆಲ್ಲೂ ಹಸಿರೋ ಹಸಿರು.

ಊರಿನ ಮನೆಯೊಂದರ ಎದುರು ಹಸಿರು ಹಂದರ ಕಟ್ಟಿದ್ದಾರೆ. ತಳಿರುಮಾವು ಬಳ್ಳಿಯಾಗಿ ಹಬ್ಬಿದಂತಿದೆ ಆ ಹಂದರ. ಅದಕ್ಕೆ ಬಣ್ಣ ಬಣ್ಣದ ಹೂವುಗಳ ಅಡಿಕೆಯ ಸಿಂಗಾರದ ತೊಂಗಲನ್ನು ಜೋಲುಬಿಟ್ಟಿದ್ದಾರೆ........ಸದಾ ನೀರವದ ಮಡಿಲಲ್ಲಿ ತೂಕಡಿಸುತ್ತಿದ್ದ ಆ ಹಳೆಯ ಮನೆಗೆ ಇದ್ದಕ್ಕಿದ್ದಂತೆಯೇ ಹರಯ ಬಂದುಬಿಟ್ಟಿದೆ. ಎಂದಿಲ್ಲದೆ ಇಂದು, ನಗು ಅಲೆಯಾಗಿ ಹೊಳಲಿಡುತ್ತಿದೆ—ಸುತ್ತಣ ಕಾಡೆಲ್ಲವೂ ಝೇಂಗುಟ್ಟುವಂತೆ. ಹೆಂಗಸರು ಗಂಡಸರು ಮಕ್ಕಳು ಮುದುಕರು—ಎಲ್ಲರೂ ರೆಕ್ಕೆ ಬಂದವರಂತೆ ನಲವಿನಿಂದ ಹಾರಾಡುತ್ತಿದ್ದಾರೆ; ನೆಲವೇ ಕಾಣಿಸದು! ........ಮನೆ ನಂದ ಗೋಕುಲವಾಗಿಬಿಟ್ಟಿದೆ!

ಆನಂದದ ಕೋಲಾಹಲದಲ್ಲಿ ವಿಭ್ರಮಗೊಂಡಿದ್ದರೂ ಮನೆಯ ಚಿತ್ತವೆಲ್ಲ, ಗುಡ್ಡಗಳನ್ನು ಬಳಸಿ ಕಣಿವೆಗಳನ್ನು ಹಾದು ಹಾವಿನಂತೆ ಮೆಯ್‌ ತಿರುಪಿ ಮಲಗಿರುವ ಹೂವಿನ ಹಾದಿಯತ್ತ.

........ಇನ್ನೇನು ಸ್ವಲ್ಪಹೊತ್ತಿನಲ್ಲಿ ಕಹಳೆ ಮೊಳಗುತ್ತದೆ; ವಾದ್ಯಗಳು ಭೋರ್ಗರೆಯುತ್ತವೆ; ಹೂವಿನ ಹಾದಿಯತ್ತಣಿಂದ ಮದುಮಗನ ದಿಬ್ಬಣ ಇಳಿದು ಬರುತ್ತದೆ!

ಆಲಸ್ಯದಿಂದ ಮೆಯ್‌ತಿರುಪಿ ಮಲಗಿದ್ದ ಆ ಹೂವಿನ ಹಾದಿಗೂ ಇಂದೇನೋ ನವಸ್ಫೂರ್ತಿಯೊದಗಿರಬೇಕು; ಕ್ಷಣದಲ್ಲಿ ಮೆಯ್ ಕೊಡವಿ ಎದ್ದೀತೋ ಎಂದು ತೋರುತ್ತಿದೆ, ಬಗೆ ಬಗೆಯ ಹಕ್ಕಿಗಳ ಸ್ವರಸಮ್ಮೇಲನದ ಚಟುವಟಿಕೆಯಿಂದ. ಮನೆಯಿಂದ ಕಣ್ಣು ಹಾಯುವಷ್ಟು ದೂರವೂ, ಗುಡ್ಡವೇರಿ ಹೋಗುವ ದಾರಿಯ ಇಕ್ಕೆಲದಲ್ಲಿ, ಮಾರಿಗೊಂದರಂತೆ, ಕೋಡು ಬಳೆದೀಪಗಳ ಪಂಜು ಮಂದವಾಗಿ ಉರಿಯುತ್ತಿದೆ. ಆಚೀಚೆಯ ಮರ ಗಿಡಗಳಿಂದ ಬೊಗಸೆಬೊಗಸೆ ಹೂವುಗಳು ಕೆಳಕ್ಕುದುರುತ್ತಿವೆ, ದೀಪವನ್ನು ಮೋಹಿಸಿ ಬೀಳುವ ಪತಂಗಪಾತರಗಿತ್ತಿಗಳಂತೆ....ನೆಲದ ತುಂಬ ನೆರಳು ಬೆಳಕಿನ ಜಮುಖಾನೆ; ಅದರಮೇಲೆ ಹೂವಿನ ರಂಗೋಲೆ.

ತಾಸು ಕ್ಷಣವಾಗಿ ಕಳೆಯುತ್ತದೆ.

ಸೂರ್ಯ ಅಸ್ತಮಿಸುತ್ತಾನೆ. ಉರಿಯುವ ಕಣ್ಣಿನ ಮೇಲೆ ಭಾರವಾದ ಎವೆ ಅರೆಯರೆಯಾಗಿ ಮುಚ್ಚಿಕೊಳ್ಳುತ್ತಿರಲು, ಯಕ್ಷಲೋಕವೇ ಬಂದಿಳಿಯುತ್ತಿರುವಂತೆ, ಸುತ್ತಣ ನೆಲವೆಲ್ಲ ಅದ್ಭುತರಮ್ಯವಾಗುತ್ತದೆ. ಪಂಜುಗಳು ಉಸಿರೇರಿಸಿಕೊಂಡು ಬೆಳಗತೊಡಗುತ್ತವೆ.

....ಮತ್ತೊಂದು ಕ್ಷಣದಲ್ಲಿ, ಈ ಅದ್ಭುತರಮ್ಯಲೋಕಕ್ಕೆ ಸಮನೆನಿಸಿ, ಮೃದುವಾದ ಸ್ವರಮೇಳವೊಂದು ಗುಡ್ಡದ ತಲೆಯ ದಾರಿಯ ದಿಕ್ಕಿನಿಂದ ಮಂದವಾಗಿ ತೇಲಿ ಬರುತ್ತದೆ. ಫಕ್ಕನೆ, ದೂರದಲ್ಲಿ ಸಿಡಿಮದ್ದುಗಳು ಸಿಡಿಯುತ್ತವೆ....ಮನೆಯೆಲ್ಲ ಕಿವಿಯಾಗಿ ಕ್ಷಣಕಾಲ ಆಲೈಸುತ್ತದೆ; ಆ ಸ್ತಬ್ಧತೆ ಕ್ಷಣಕಾಲ ಅಷ್ಟೆ.

ಕಹಳೆ ಮೊಳಗುತ್ತದೆ; ವಾದ್ಯಗಳು ಭೋರ್ಗರೆಯುತ್ತವೆ.

ಮತ್ತೆ ಆನಂದಕೋಲಾಹಲ....

ಈಗ, ಗುಡ್ಡದ ನೆತ್ತಿಯಲ್ಲಿ, ಸಾಲುದೀವಟಿಗೆಗಳು ಬೆಳಗುತ್ತ ಬರುವುದು ಕಾಣಿಸುತ್ತದೆ. ಮಂದವಾದ ಬೆಳಕಿನಲ್ಲಿ ಸಾಲುಗಟ್ಟಿ ಬರುವ ಜೋಡೆತ್ತಿನ ಗಾಡಿಗಳು ಅಸ್ಪಷ್ಟವಾಗಿ ತೋರುತ್ತವೆ. ವಾದ್ಯದ ಮೊರೆತ,

ಜನಗಳ ನಗು, ಗಾಡಿಯ ಗೆಜ್ಜೆಗಳ ಝಣತ್ಕಾರ, ಗಾಡಿಕಾರರ ರಾಗಬದ್ಧವಾದ ಕೂಗು ಹಾಡು–ಎಲ್ಲವೂ ಬೆರೆತು ನೊರೆನೊರೆಯಾಗಿ ತೆರೆತೆರೆಯಾಗಿ ಕೆಳಗಿನ ಕಣಿವೆಯನ್ನು ತುಂಬಿ ಉಕ್ಕುತ್ತದೆ.

ಮದುವಣಿಗನ ದಿಬ್ಬಣ ಬಂದೇಬಿಟ್ಟಿತು !

ಹಸಿರು ಹಂದರದ ಮನೆ ಒಗುವಿಗುವ ಸಂಭ್ರಮಣೆಯಿಂದ ಸ್ವಾಗತಕ್ಕೆ ಸಿದ್ಧವಾಗುತ್ತದೆ. ತಂಪಾದ ದೀಪದ ಬೆಳಕಿನಲ್ಲಿ ಸೆರಗುಗಳು ಸರಿದಾಡುತ್ತವೆ, ಕಾಮನಬಿಲ್ಲು ಮೂಡುವಂತೆ !

ಕಹಳೆ ಮೊಳಗುತ್ತಲೇ ಇದೆ; ವಾದ್ಯಗಳು ಭೋರ್ಗರೆಯುತ್ತಲೇ ಇವೆ.

ದಿಬ್ಬಣ ಬಂದೇಬಿಟ್ಟಿತು :

ಎದುರಿನಲ್ಲಿ ಅತ್ಯಂತ ಸುಂದರವಾಗಿ ಅಲಂಕೃತವಾದ ದಂಡಿಗೆ; ಅದಕ್ಕೆ ಮುಂದೆ ವಾದ್ಯದವರು, ಮದ್ದಿನವರು; ದಂಡಿಗೆಯ ಆಚೆಯೀಚೆ ಅಲಂಕೃತರಾದ ಹಿರಿಯರು ; ಹಿಂದೆ, ಮಂದಗತಿಯಲ್ಲಿ ಗೆಜ್ಜೆಯ ದನಿಯನ್ನು ಮೆರೆಸುತ್ತ ಬರುವ ಸಾಲುಗಾಡಿಗಳು....

ದಂಡಿಗೆ ಹಸಿರು ಹಂದರದಡಿಗೆ ಬಂದು ನಿಲ್ಲುವಷ್ಟರಲ್ಲಿ ಮಕ್ಕಳು ಅರಳಿನ ಮಳೆಗರೆಯುತ್ತಾರೆ, ಮದುವಣಿಗನ ಮೇಲೆ.

ಆಹ್, ಏನು ಚೆಲುವ ಮದುಮಗ !

ಜನರ ದೃಷ್ಟಿ ತಾಕೀತೆಂದು, ಜೋಯಿಸರು ಇಡಿಗಾಯಿ ಒಡೆದು ಓಕುಳಿ ಸುಳಿದು ಚೆಲ್ಲುತ್ತಾರೆ. ಚೆಲುವೆಯರಿಬ್ಬರು ಬಂದು, ಮಧುರವಾದ ಮಂತ್ರಗಾನದ ನಡುವೆ, ಹೊಂದಟ್ಟೆಯಲ್ಲಿ ಆರತಿಯೆತ್ತುತ್ತಾರೆ— ತಮ್ಮ ಕಣ್ಣಿನ ಮಿಂಚಿನಿಂದ ಹಂದರವನ್ನು ಬೆಳಗುತ್ತ.

ಆಹ್, ಏನು ಚೆಲುವ ಮದುಮಗ !

ತುಂಬಿದ ಬಟ್ಟಲುಮೊಗ; ತಲೆಗೆ ಅಂದವಾದ ಪಾಗು; ಅದರ ಮೇಲೆ ಮುತ್ತಿನ ಬಾಸಿಗ; ಕಿವಿಗೆ ಹರಳಿನ ಗಾಲಿಜಂಟಿ; ಹಣೆಯಲ್ಲಿ ಕಸ್ತೂರಿ ತಿಲಕ; ಕೊರಳಿನಲ್ಲಿ ಥಳಥಳಿಸಿ ಜೋಲುವ ಏಳೆಳೆಯ ಚಿನ್ನದ ಹಾರ; ಅಂದವಾದ ಉಡಿಗೆಯಮೇಲೆ ಚತುರ್ಭುಜವಾಗಿ ಬಿಗಿದ, ರೇಸಿಮೆಯ, ಅಂಗೈಯಗಲ ಜರಿಯ, ಹೂವಿನ ಉತ್ತರೀಯ ; ಬಲವಾದ ದುಂಡುದೋಳನ್ನು ಗುರುತಿಸಿ ತೋರಿಸಿ ನಳನಳಿಸುವ ಬಂಗಾರದ ವಂಕಿ; ದಂಡಿ

ಗೆಯ ಮೇಲೆ ನೇಲುವ ಗೊಂಡೆಯನ್ನು ಮೃದುವಾಗಿ ಹಿಡಿದಿರುವ ಬಲಗೈ ಬೆರಳುಗಳಲ್ಲಿ ಸಾಲಾಗಿ ಬೆಳಗುವ ಹರಳಿನ ಉಂಗುರಗಳು; ಬೆರಳಂಚಿನ ಜರಿಯ ಪಂಚೆ; ಅದರ ಮೇಲೆ ಎದ್ದು ಮಿನುಗುವ ನೇವಳ!

—ನಿಜ, ಏನು ಚೆಲುವ ಮದುಮಗ !

ಮುದುಕರ ನೆತ್ತರು ಬಿಸಿಯೇರುತ್ತದೆ; ತರುಣರ ಮೆಯ್ ಉದ್ರೇಕ ದಿಂದ ಕಂಪಿಸುತ್ತದೆ; ಹರೆಯದ ಹೆಣ್ಣುಮಕ್ಕಳು ಆನಂದಾತಿರೇಕದಿಂದ ಮುಗ್ಧರಾಗಿ ಹೋಗುತ್ತಾರೆ!

....ಮೃದುವಾಗಿ ಕಂಪಿಸುವ ಕೋಗಿಲೆಯ ಕಂಠದಲ್ಲಿ ಚೆಲುವೆ ಯೊಬ್ಬಳು ಹಾಡತೊಡಗುತ್ತಾಳೆ :

ಕೆರೆ ತುಂಬಿ ನಿಂತಂತೆ ಹೊಳೆ ತುಂಬಿ ಹರಿದಂತೆ
ಸಣ್ಣೆಳೆ ಸರಪಣಿ ಹೊಳೆವಂತೆ
ಸಣ್ಣೆಳೆ ಸರಪಣಿ ಹೊಳೆವಂತೆ ತಮ್ಮಯ್ಯ
ಸೊಬಗೀಲೊಲೆಯುತ ಬರುತಾನೆ—ತಾ
ಬರುತಾನೆ ಸೊಬಗೀಲೊಲೆಯುತ.......

'ಕೆರೆ ತುಂಬಿ ನಿಂತಂತೆ!'—ಅಹುದು, ಅಂತಹದೇ ಗಾಂಭೀರ್ಯ! ಆದರೆ, ತುಂಬಿ ನಿಂತ ಕೆರೆಗೆ ಈ ಬಗೆಯ ಚಟುವಟಿಕೆ ಎಲ್ಲಿ ಬಂದೀತು?.... 'ಹೊಳೆತುಂಬಿ ಹರಿದಂತೆ!'—ನಿಜ, ಅದೇ ಯೋಗ್ಯವಾದ ಉಪಮಾನ! ಸೊಬಗಿನಿಂದ ಒಲೆಯುತ್ತ ಬರುವ ಈ 'ತಮ್ಮಯ್ಯ'ನನ್ನು ಹೀಗೆ ಹಾಡಿ ಸ್ವಾಗತಿಸುವವರೇ ಧನ್ಯರು !

....ಅದೇ ಮಧುರವಾದ ಸ್ವರದಲ್ಲಿ ಚೆಲುವೆಯ ಹಾಡು ಮುಂದು ವರಿಯುತ್ತದೆ :

ಸೊಬಗೀಲೊಲೆಯುತ ಬಾರೊ ಸೊಬಗಿನ ಚಿಂತಾಮಣಿಯೆ
ಸೊಬಗು ಸೂರ್ಯಮನೆ ಹೊಳೆದಂತೆ
ಸೊಬಗು ಸೂರ್ಯಮನೆ ಹೊಳೆದಂತೆ ತಮ್ಮಯ್ಯ
ಸೊಬಗೀಲೊಲೆಯುತ ಬರುತಾನೆ........

'ಸೊಬಗು ಸೂರ್ಯಮನೆ ಹೊಳೆದಂತೆ!' 'ಸೊಬಗಿನ ಚಿಂತಾ ಮಣಿ!'—ಎಂತಹ ಹೊಗಳಿಕೆ ತನಗೆ! ಅಪ್ಪಟ ಬಂಗಾರ!....ಇಂತಹ

ಚೆಲುವೆಯಿಂದ ಹೀಗೆ ಹೊಗಳಿಸಿಕೊಳ್ಳುವ ತಾನು ಧನ್ಯ!—ಆದರೆ ಆ ಮದುಮಗನಿಗೆ ಗೊತ್ತು, ಈ ದಿನ ಈ ಜನ ಈ ಆನಂದ—ಈ ವಿಾಸಲಳಿಯದ ಎಲ್ಲವೂ—ತನ್ನ ಸಹಜ ಹಕ್ಕು ಎಂದು. ಇಷ್ಟಕ್ಕೆ ಮುಗಿಯಲಿಲ್ಲ. ಇದೆಲ್ಲಕ್ಕೂ ಕಿರೀಟಪ್ರಾಯವಾದ ಚೆಲುವು ತನ್ನ ಮನೆದುಂಬಲಿದೆ, ಮೆಯ್ದುಂಬಲಿದೆ, ಮನದುಂಬಲಿದೆ. ಉಕ್ಕಿಬರುವ ಆನಂದವನ್ನು ಎದೆಯಲ್ಲಿ ಒತ್ತಿ ಹಿಡಿದು, ಗಾಂಭೀರ್ಯವನ್ನು ತುಸುವೂ ಕುಗ್ಗಿಸಿಕೊಳ್ಳದೆ ದಂಡಿಗೆಯಿಂದಿಳಿಯುತ್ತಾನೆ ಮದುಮಗ, ಜೋಯಿಸರು ಕೈಗೊಟ್ಟಿರಲು. ಆಹ್, ಅದೇನು ಸೊಗಸು ಈ ಸೊಬಗ ದಂಡಿಗೆಯಿಂದ ಕೆಳಕ್ಕೆ ನೆಗೆಯುವುದು!.... ಚೆಲುವೆ ಪುಳಕಗೊಂಡು ಹಾಡುತ್ತಾಳೆ:

ಏರಿಮ್ಯಾಲಿನ ಹುಲಿ ಗದ್ದಲಿಸಿ ಇಳಿದಂತೆ
ನೀವಳದ ಪದುಮ ಹೊಳೆವಂತೆ
ನೀವಳದ ಪದುಮ ಹೊಳೆದಂತೆ ತಮ್ಮಯ್ಯ
ಬರುತಾನೆ ಸೊಬಗೀಲೊಲೆಯುತ.......

ಮತ್ತೆ ಸ್ವಾಗತದ ಪಲ್ಲವಿ:

ಸೊಬಗೀಲೊಲೆಯುತ ಬಾರೊ ಸೊಬಗಿನ ಚಿಂತಾಮಣಿಯೆ
ಸೊಬಗು ಸೂರ್ಯಮನೆ ಹೊಳೆದಂತೆ

ಮಂಗಲತೂರ್ಯಗಳಿಂದ ಬೇರೆಯಾಗಿ ಕಿವಿತುಂಬುವ ಜೋಯಿಸರ ಮಂಗಲಮಂತ್ರ ಮುಂದುವರಿದಿರಲು, ಮಾವ ಕೈಹಿಡಿದು ಕೊಂಡೊಯ್ಯುತ್ತಿರಲು, ಕಾತರದಿಂದ ಕುಣಿಯುವ ಕಿವಿಕಣ್ಣುಗಳನ್ನು ಸ್ಥಿರಗೊಳಿಸಿ, ಗಂಭೀರವಾಗಿ ಮದುವೆಯ ಮಂಟಪದತ್ತ ಹೆಜ್ಜೆ ಹಾಕುತ್ತಾನೆ ಮದುಮಗ. ಆತನ ಹೆಜ್ಜೆಯ ಮಂದಗತಿಗೆ ಹೊಂದಿಸಿಕೊಂಡು ಚೆಲುವೆ ಹಾಡುತ್ತಾಳೆ:

ಅಡಕೆಯ ಮರಕೆ ತಣ್ಣಗೆ ಬೀಸುವ ಗಾಳಿ
ತೊನೆವಂತೆ ತನುವ ತೂಗಾಡಿ
ತೊನೆವಂತೆ ತನುವ ತೂಗಾಡಿ ತಮ್ಮಯ್ಯ
ಸೊಬಗೀಲೊಲೆಯುತ ಬರುತಾನೆ....

ಚೆಲುವೆಯ ಸಂಗಡಿತಿಯೊಬ್ಬಳು ದನಿಗೂಡಿಸುತ್ತಾಳೆ:

ಸೊಬಗೀಲೊಲೆಯುತ ಬಾರೊ ಸೊಬಗಿನ ಚಿಂತಾಮಣಿಯೆ
ಸೊಬಗು ಸೂರ್ಯಮನೆ ಹೊಳೆದಂತೆ
ಸೊಬಗು ಸೂರ್ಯಮನೆ ಹೊಳೆದಂತೆ ತಮ್ಮಯ್ಯ
ಸೊಬಗೀಲೊಲೆಯುತ ಬರುತಾನೆ-ತಾ
ಬರುತಾನೆ ಸೊಬಗೀಲೊಲೆಯುತ....

ತನ್ನ ಗೆಳತಿಯೂ ದನಿಗೂಡಿಸಿರಲು, ಮೃದುವಾಗಿ ತೇಲಿಬರುವ ಗಾಳಿಗೆ ಮೆಯ್ಯಾಡಿಸುವ ಅಡಕೆಯ ಮರದಂತೆ ಸೊಬಗಿನಿಂದ ಒಲೆಯುತ್ತ ಬರುವ ಆ ಸೊಬಗಿನ ಚಿಂತಾಮಣಿಯನ್ನು ಎಷ್ಟು ಬಗೆಯಲ್ಲಿ ಬಣ್ಣಿಸಿ ತಾನೆ ತೃಪ್ತಿಪಡೆದಾಳು ಆ ಚೆಲುವೆ?....ಗೆಳತಿಯ ಸಮಯಸ್ಫೂರ್ತಿಯಿಂದ ಪುಟಿದ ಚೆಂಡಿನಂತೆ ಮನಸ್ಸು ಕುಣಿಯುತ್ತಿರಲು, ಚೆಲುವೆಯ ಹಾಡು ಮುಂದುವರಿಯುತ್ತದೆ :

ತೆಂಗಿನಮರಕೆ ತೆವಳಿ ತೀಡುವ ಗಾಳಿ
ಅಲ್ಲಾಡುವಂತೆ ತಲೆದೂಗಿ
ಅಲ್ಲಾಡುವಂತೆ ತಲೆದೂಗಿ ತಮ್ಮಯ್ಯ
ಸೊಬಗೀಲೊಲೆಯುತ ಬರುತಾನೆ........

—ಅಡಿಕೆಯಾಯಿತು, ತೆಂಗಾಯಿತು. ಆದರೇನು, ನೂರು ಉಪಮಾನಗಳನ್ನು ಪೋಣಿಸಿದ ನುಡಿಗೂ ಸಿಲುಕದು ಆತ ಒಲೆದು ಬರುವ ಸೊಗಸು. ಆ ಸಹಜವಾದ ಸೊಬಗಿಗೆ ತಕ್ಕುದಾದ ಶೃಂಗಾರ;-ಆ ಶೃಂಗಾರದಿಂದ ಆತನ ಚೆಲುವು ಇಮ್ಮಡಿಸಿತೊ, ಈ ಚೆಲುವಿನಿಂದ ಆ ಶೃಂಗಾರಕ್ಕೆ ಒಂದು ಹೊಸ ಕಳೆ ಬಂದಿತೋ ಹೇಳುವುದು ಕಷ್ಟ.

ಹರಳಿನುಂಗುರ ಕೈಗೆ ಹರಳಿನೊಂಟಿ ಕಿವಿಗೆ
ನೆರಳಾಡಿಸಿ ನಡೆದು ಬರುತಾನೆ
ನೆರಳಾಡಿಸಿ ನಡೆದು ಬರುತಾನೆ—ತಮ್ಮಯ್ಯ
ಸೊಬಗೀಲೊಲೆಯುತ ಬರುತಾನೆ........

ಮೆಯ್ತುಂಬ ಹೊಳೆಹೊಳೆಯುವ ಹರಳುಗಳು ಎಡೆಯೆಡೆಗೂ ನೆರಳಾಡಿಸುತ್ತವೆ.

ಹೆಸಗೆರೆ ಸೂತ್ರದ ದಂಡೆ ಹೊಳೆಯುವ ಪದುಮದ ದಂಡೆ
ಬಹುಮಾನದ ಗೊಂಡೆ ಒಲೆಸುತ....

ಬಹುಮಾನದ ಗೊಂಡೆ ಒಲೆಸುತ ತಮ್ಮಯ್ಯ
ಸೊಬಗೀಲೊಲೆಯುತ ಬರುತಾನೆ

—ಇಷ್ಟುಹೊತ್ತು ಪಲ್ಲವಿಯನ್ನೆ ಹಾಡುತ್ತಿದ್ದ ಚೆಲುವಿಯ ಗೆಳತಿಗೂ ಸ್ಫೂರ್ತಿಯುಕ್ಕುತ್ತದೆ. ಆಕೆಯೂ ಒಂದು ನುಡಿಯನ್ನು ಜೋಡಿಸುತ್ತಾಳೆ :

ಬೆಂಡಿನ ಬಾಸಿಂಗ ಮಂಡೆಗೆ ಕಟ್ಟಕೊಂಡು
ಅಕ್ಕದಿರೊಡಗೊಂಡು ಬರುತಾನೆ

ಚೆಲುವೆ ಅದಕ್ಕೆ ಮತ್ತೊಂದು ನುಡಿಯನ್ನು ಪೋಣಿಸುತ್ತಾಳೆ :

ಮುತ್ತಿನ ಬಾಸಿಂಗ ಶಿರದಲೇರಿಸಿಕೊಂಡು
ಅಣ್ಣದಿರೊಡಗೊಂಡು ಬರುತಾನೆ

ಇಬ್ಬರೂ ಕೂಡಿ ಹಾಡುತ್ತಾರೆ :

ಸೊಬಗಿಲೊಲೆಯುತ ಬಾರೊ ಸೊಬಗಿನ ಚಿಂತಾಮಣಿಯೆ
ಸೊಬಗು ಸೂರ್‍ಯಮನೆ ಹೊಳವಂತೆ
ಸೊಬಗು ಸೂರ್‍ಯಮನೆ ಹೊಳೆವಂತೆ ತಮ್ಮಯ್ಯ
ಸೊಬಗಿಲೊಲೆಯುತ ಬರುತಾನೆ........

ಇನ್ನು ಮದುವೆ........

ಮನೆಯ ಆನಂದದ ಹುಯ್ಯಲಿನಲ್ಲಿ, ಭೋರ್ಗರೆಯುವ ಮಂಗಲ ವಾದ್ಯಗಳ ನಡುವೆ, ಮಧುರವಾದ ಮಂತ್ರಗಾನದ ಜೊತೆಯಲ್ಲಿ ಈ ಸೊಬಗನನ್ನು ಹಾಡಿ ಸ್ವಾಗತಿಸಿಯಾಯಿತು. ಮದುಮಗ ಹೂವಿನಿಂದ ಅಲಂಕೃತವಾದ ಮದುವೆಯ ಮಂಟಪದಲ್ಲಿ ಕುಳಿತ.

ಗುತ್ತಿಂದ ಬಂದರು ಮುತ್ತಿನಂಥ ಜೋಯಿಸರು
ಮಂಟಪದ ಕಂಬದಡಿ ನಿಂತರು

ಅಂಥಿಂಥವರಲ್ಲ, ಮುತ್ತಿನಂಥ ಜೋಯಿಸರು. ದೂರದ ಗುತ್ತಿಯ ನಾಡಿನಿಂದ ಬಂದಿದ್ದಾರೆ........ ಹೊಳೆಹೊಳೆಯುವ ಮಂಗಲವರ್ಣದ ಅಂತಃಪಟ ಮಂಟಪದ ನಡುವೆ ತೇಲಿತು. ಮದುವೆಯ ಹೆಣ್ಣನ್ನು ಸೋದರಮಾವ ಕರೆದುತಂದು ನಿಲ್ಲಿಸಿದ. ಆನಂದತೂರ್‍ಯಗಳು ಹಿನ್ನೆಲೆಯಲ್ಲಿ ವಿಜೃಂಭಿಸುತ್ತಿರಲು, ಕಲ್ಯಾಣ ಮಂತ್ರದ ಮಧುರಗಂಭೀರಸ್ವರ

ಆಶೀರ್ವಾದ ಸ್ವಸ್ತಿವಾಚನಗಳನ್ನು ಝೇಂಕರಿಸಲು, ಅಂತಃಪಟ ಕೆಳಗಿಳಿಯುತ್ತಿರುವಂತೆ ಹೂಮಾಲೆ ಕೊರಳಿಗೆ ಬಿದ್ದಿತು.

ಮಂಟಪದ ಕಂಬದಡಿ ನಿಂತರು ಜೋಯಿಸರು
ಹೆಣ್ಣು ಕೈಧಾರೆ ಎರೆದರು

ಧಾರೆಯಾಯಿತು.

ಕಹಳೆ ಮತ್ತೆ ಮೊಳಗಿತು. ವಾದ್ಯಗಳು ಉಕ್ಕುಗಡಲಿನಂತೆ ಭೋರ್ಗರೆಯುತ್ತಲೇ ಇದ್ದುವು.

ಈ ಸಂತಸದ ಹುಯ್ಯಲಿನಲ್ಲಿಯೂ ನೊಂದು ಮುದುಡಿಕೊಳ್ಳುತ್ತಿತ್ತು ಹೆತ್ತ ಕರುಳು: ನಲವಿನ ಕೊರಳಿನಲ್ಲಿ ಕಂಬನಿ ಕಟ್ಟಿದ ಮುತ್ತಿನ ಮಾಲೆ! ಜೋಯಿಸರು ಹೆಣ್ಣಿನ ತಂದೆಯತ್ತ ನೋಡಿದರು,—

ಹೆಣ್ಣಿನ ಕೈಧಾರೆ ಎರೆದಿರಿ ಗೆದ್ದಿರಿ
ಮರ ನೋಡಿ ಬಳ್ಳಿ ನೆಟ್ಟಿರಿ

ಎಂದು ಹೇಳುವಂತೆ! ಹಾಗೆಯೇ ವಾತ್ಸಲ್ಯದ ಪರಿಹಾಸ್ಯದಿಂದ ಹೆಣ್ಣಿನ ಕಡೆಗೆ ತಿರುಗಿದರು; ಅವರ ಮಮತೆಯ ದೃಷ್ಟಿ, ಹೆಣ್ಣಿಗೆ ಹೇಳುತ್ತಿತ್ತು:

ಮರನೋಡಿ ಬಳ್ಳಿ ನೆಟ್ಟರು ಮುತ್ತಿನ ಮುಡಿಯು
ಚೆನ್ನೆ ನೀ ಸೋತೆ ನಡೆ ಹಿಂದೆ

—ಆದರೆ, ಆ ಚೆನ್ನೆಯ ತಂದೆಯ ನೀರಾಡುವ ಕಣ್ಣುಗಳನ್ನು ಕಂಡ ಎಲ್ಲರಿಗೂ ಗೊತ್ತು, ಆತ ಗೆದ್ದೂ ಸೋತನೆಂದು; ಈಕೆ ಸೋತೂ ಗೆದ್ದಳೆಂದು.

ಮದುವೆ ಮುಗಿಯಿತು. ಇನ್ನು ಮದುಮಕ್ಕಳನ್ನು ಹಸೆಯಮೇಲೆ ಕೂರಿಸಿ ಆರತಿ ಬೆಳಗಬೇಕು.

ಗುತ್ತಿಂದ ಬಂದರು ಮೂವರು ಮುತ್ತೈದೇರು
ಅಂದವಲಿ ಹಸೆಯ ಬರೆದರು
ಅಂದವಲಿ ಹಸೆಯ ಬರೆದರು ಸುತ್ತೆಲ್ಲ
ಹಚ್ಚಿಟ್ಟರು ಹೊನ್ನ ಕಲಶವ

ಹಸೆಯನ್ನು ಸಿಂಗಾರದಿಂದ ಅಣಿಗೊಳಿಸಿ, ಸುತ್ತ ಹೊನ್ನಕಲಶದ ದೀಪ ಬೆಳಗಿಸಿ ಆ ಮುತ್ತೈದೆಯರು ಹಾಡಿದರು:

ಹಚ್ಚಿಟ್ಟೆವು ಹೊನ್ನ ಕಲಶವ ಮದುವಳಿಗೆ
ಬಲಗಾಲ ಮುಂದಿಟ್ಟು ಹಸೆಗೇಳು

ಬಲಗಾಲನ್ನು ಮುಂದಿಟ್ಟು ಚೆನ್ನೆ ಹಸೆಯೇರಿದಳು.

ಕಹಳೆ ಮೊಳಗಿತು; ಮಂಗಲವಾದ್ಯಗಳು ಭೋರ್ಗರೆದವು. ಮುತ್ತೈದೆಯರು ಮುತ್ತಿನ ಆರತಿಯೆತ್ತಿ ಮಂಜುಲಸ್ವರದಲ್ಲಿ ಹಾಡಿದರು:

ಬಲಗಾಲ ಮುಂದಿಟ್ಟು ಹಸೆಗೇಳು ಮದುವಳಿಗೆ
ಕಡಗದ ಕೈಯೆತ್ತಿ ಶರಣೆನ್ನು

ಕಡಗದ ಕೈಯೆತ್ತಿ ಶರಣೆಂದಳು ಮದುಮಗಳು.

ಕಡಗದ ಕೈಯೆತ್ತಿ ಶರಣೆನ್ನು ಮದುವಳಿಗೆ
ಉಂಗುರದ ಬೆರಳೆತ್ತಿ ಶರಣೆನ್ನು

ಉಂಗುರದ ಬೆರಳೆತ್ತಿ ಶರಣೆಂದಳು ಮದುಮಗಳು.

—ತನ್ನ ಚೆಲುವಿಯ ಕೈಕಡಗದ ಝಣತ್ಕಾರವನ್ನು ಮೀರಿಸುವ ಬೇರಾವ ಮಂಗಲವಾದ್ಯಗಳು ಮೊಳಗಿಯಾವು ಆತನ ಕಿವಿಯಲ್ಲಿ? ತನ್ನ ಚೆನ್ನೆಯ ಕುಡಿಗಣ್ಣಿನ ಮಿಂಚಿನಾರತಿಗೆ ಮಿಗಿಲಾಗಿ ಇನ್ನಾವ ಮಂಗಲಾರತಿ ಬೆಳಗೀತು ಆತನ ಮನವನ್ನು?



## ೧೦. ಹಾಲಿನ ಕೂಡ ಹಾಲ ಹದಮಾಡೆ

ಗುತ್ತಿಗುಡ್ಡದ ವ್ಯಾಲೆ ಕಟ್ಟಿಸಿದ ಮಠಗಳು
ಸುತ್ತೆಲ್ಲ ಜಾಜಿ ಮಲ್ಲಿಗೆ

ನಾಡಿನೊಳಗೆಲ್ಲ ಚೆನ್ನು ಗುತ್ತಿಯನಾಡು. ಹೆಸರು ಕೇಳಿದರೆ ರಸಿಕರು ಮೆಯ್ ಮರೆಯುವ ಮಲೆನಾಡಿನ ಚೆಲುವನ್ನು ಕಲ್ಪಿಸಿಕೊಳ್ಳಬಲ್ಲಿರಲ್ಲವೆ? ಆ ಮಲೆನಾಡಿನಲ್ಲಿ ಹಲವು ಕಿರುನಾಡುಗಳಿದ್ದಾವೆ. ಅವುಗಳಲ್ಲೆಲ್ಲ ಸೊಬಗಿಗೆ ಆಯ್ದಿಟ್ಟದ್ದು ಇದು. ಆ ಕಿರುನಾಡಿನ ಚೆಲುವಿಗೆ ಪಚ್ಚೆಯ ಕಳಶವೆಂಬಂತೆ ಅಲ್ಲಿ ಒಂದು ಹಸಿರಿನ ಗುಡ್ಡ. ಅದರಮೇಲೆ ಸಾಲುಸಾಲಾಗಿ ಮನೆಗಳು. ಅವುಗಳ ವೈಭವ ನೋಡಿದರೆ, ಮನೆ ಎನ್ನುವುದಕ್ಕಿಂತ ಮಠ ಎನ್ನಬೇಕು.........ಗಂಭೀರವಾಗಿ ಕುಳಿತ ಆ ಬೆಟ್ಟದ ಅರಸನಿಗೆ ವಸಂತರಾಗದ ಕಿರೀಟವೆಂಬಂತೆ, ನೆತ್ತಿಯಲ್ಲಿ ಮನೆಗಳನ್ನು ಸುತ್ತಿ ಕಂಗೊಳಿಸುತ್ತವೆ ಜಾಜಿ ಮಲ್ಲಿಗೆಯ ಬನಗಳು.

ಈ ಸೊಬಗು ಕಂಡರೆ ಇಲ್ಲಿ ಯಾವ ರಸಿಕನಿದ್ದಾನು ಎಂಬ ಕುತೂಹಲ ಹುಟ್ಟುತ್ತದೆ, ಅಲ್ಲವೆ? ಬನ್ನಿ, ಆ ರಸಿಕರಾಯನ ಪರಿಚಯ ಮಾಡಿಕೊಳ್ಳೋಣ........

ಸಾಯಂಕಾಲದ ಈ ಕುಸುಮಿತ ಸಮಯದಲ್ಲಿ,

ಸುತ್ತೆಲ್ಲ ಜಾಜಿ ಮಲ್ಲಿಗೆ ಬನದಾಗೆ
ರಾಯ ಕುಸುಮಾಲೆಗೂ ಚೆಂಡಾಟ

ತನ್ನ ಮುದ್ದುಮಡದಿ ಕುಸುಮಾಲೆಯ ಕೂಡ ಚೆಂಡಾಟ ನಡೆಸಿದ್ದಾನೆ ಈ ಸವಿಗಾರ. ಕೂಡ ಇರುವವಳು ಕುಸುಮಾಲೆ, ಆಡುತ್ತಿರುವುದು ಹೂವಿನ ಚೆಂಡು!

ರಾಯ ಕುಸುಮಾಲೆಗೂ ಚೆಂಡಾಟ ನಡೆವಾಗ
ಹೂವಿನ ಚೆಂಡೇ ಉರುಳ್ಯಾವು

ಒಮ್ಮೆ ಆ ಚೆಲುವಿಯ ಮೆಯ್ ತಾಕಿ ಇನ್ನೊಮ್ಮೆ ಈ ರಾಯನ ಮುಖಕ್ಕೆ

ಮುದ್ದಿಟ್ಟು, ಇವರಿಬ್ಬರ ಕಣ್ಣಿನ ಕುಣಿತದ ಕೂಡ ತಾನೂ ಆಡಿ ಆಡಿ, ಜಾರಿಬಿಟ್ಟಿತು ಆ ಹೂವಿನ ಚೆಂಡು.

ಹೂವಿನ ಚೆಂಡೇ ಉರುಳ್ಯಾವು ಮನೆಯೊಳಗೆ
ಹೂಜಡೆಯ ಹುಡುಗಿ ಕೊಂಡುಬಾರೆ

ತನ್ನ ಹುಡುಗಿಯ ಹೂಜಡೆಯನ್ನೊಮ್ಮೆ ಎಳೆದು ಬೆನ್ನು ತಟ್ಟಿ ಕಳುಹಿದ ರಾಯ. ಆಕೆ ಹುಸಿಮುನಿಸಿನ ಓರೆನೋಟದಿಂದ ಒಳಕ್ಕೆ ಪುಟಿದಳು :

ಕಾಲ ಕಿರುಗೆಜ್ಜೆ ಝುಂಯ್ಯಂತ ಕುಣಿದಾವು

ಚೆಂಡು ಆಯಲು ಮನೆಯೊಳಕ್ಕೆ ಓಡಿದ ಚೆಲುವೆಯನ್ನು ಹಿಂಬಾಲಿಸಿದ ರಾಯ. ಆದರೆ ಅಷ್ಟರಲ್ಲಿ,

ತಾಯವ್ವ ಮಗನ ಕರೆದಾಳು

—ರಾಯ ಕುಸುಮಾಲೆಯರ ಮನೆ ಇದು. ಆದರ ಒಂದು ಪಕ್ಕದಲ್ಲಿ ಆತನ ಇತರ ಮಡದಿಯರ ಮನೆಗಳು. ಮತ್ತೊಂದು ಬದಿಯಲ್ಲಿ ತಾಯಿಯರ ಮನೆಗಳು—....ತನ್ನ ಮನೆಯ ಹೊರಸಾಲೆಯ ಕಿಟಕಿಯಲ್ಲಿ ನಿಂತು ಇಷ್ಟುಹೊತ್ತು ತಮ್ಮ ಸರಸವನ್ನು ನೋಡುತ್ತಿದ್ದಿರಬೇಕು ಹಡೆದ ತಾಯಿ....ತನ್ನನ್ನೇಕೆ ಕರೆದಿದ್ದಾಳು ಈಗ?....ತುಸು ನಾಚಿಕೆಯಾಯಿತು ರಾಯನಿಗೆ.

ತಾಯವ್ವ ಮಗನ ಕರೆದು ಏನೆಂದಳು
ನಿನ್ನ ಸತಿಯರು ನಾಲ್ಕೈದು
ನಿನ್ನ ಸತಿಯರು ನಾಲ್ಕೈದು ಜನವುಂಟು
ಯಾವಾಕೆ ಮ್ಯಾಲೆ ಮನವುಂಟು

ತಮ್ಮ ಸಂಜೆಯ ಸರಸವನ್ನು ಕಂಡ ತಾಯಿ, ಆನಂದಿತಳಾಗಿ ಪರಿಹಾಸಕ್ಕೆಂದು ಈ ಮಾತನ್ನು ಕೇಳಿರಬೇಕು—ಎಂದುಕೊಂಡ ರಾಯ. 'ಕಾಣಲಿಲ್ಲವೆ?' ಎಂದು ಕಣ್ಣಿನಲ್ಲೆ ಪ್ರಶ್ನಿಸಿ ಹೇಳಿದ:

ಇಬ್ರಿಗಿಂತ ಹಿರಿಯವಳು ಇಬ್ರಿಗಿಂತ ಕಿರಿಯವಳು
ನಡುಗಣ ಚೆಲುವೆ ಕುಸುಮಾಲೆ
ನಡುಗಣ ಚೆಲುವೆ ಕುಸುಮಾಲೆ ತಾಯವ್ವ
ಆಕೆಗೂ ನಮಗೂ ಚಳಿಮಾವು

ಆಕೆಗೂ ನಮಗೂ ಚಳಿಮಾವು!–ಭಲಾ!–ನಿಜ, ಆ 'ಚಳಿ' ತಾಕಿತಲ್ಲದೆ ಈ 'ಮಾವು' ಹೇಗೆ ಹೂಬಿಟ್ಟೀತು?........ಆದರೆ, ರಾಯನ ಮನಸ್ಸನ್ನು ಸೂರೆಗೊಂಡು ಕುಣಿಸಿದ ಆ ಬಡನಡುವಿನ 'ನಡುಗಣ ಚೆಲುವೆ' ಅತ್ತೆಯ ಕಣ್ಣಿಗೆ ಬೇರೊಂದು ಬಗೆಯಾಗಿ ಕಂಡಿದ್ದಳು. ಅಂತೆಯೇ ಆಕೆ ಮಗನನ್ನು ಹತ್ತಿರಕ್ಕೆ ಕರೆದು, ಎಚ್ಚರಿಕೆಯೆನ್ನುವಂತೆ, ತಣ್ಣನೆಯ ಪಿಸುಮಾತಿನಲ್ಲಿ ಹೇಳುತ್ತಾಳೆ:

ನಡುಗಣ ಚೆಲುವೆ ಕುಸುಮಾಲೆ ನನ ಮಗನೆ
ಜೋಗಿ ಜಂಗಮಗು ಒಲಿವಳು

—ಎಂತಹ ಮಾತು!........ಕಿವಿಮುಚ್ಚಿದರೇ ಲೇಸು........ತನ್ನ ಮೆಚ್ಚಿನ ರಾಣಿಯ ಬಗೆಗೆ ತಾಯಿ ಹೀಗೆ ಆಡಿಯಾಳು ಎಂದು ತಾನು ಕನಸಿನಲ್ಲಿಯೂ ಊಹಿಸಲಾರ....ಆದರೆ ಹೇಳುತ್ತಿದ್ದಾಳೆ!........ಅಥವಾ ಏನಾದರೊಂದು ಒಗಟು ಹೇಳುತ್ತಿದ್ದಾಳೆಯೆ?........ಇಲ್ಲ, ಆಕೆಯ ಮುಖಭಾವ ನೋಡಿದರೆ, ಆಡಿದ ಮಾತು ಸತ್ಯವೆಂಬ ಸ್ಥೈರ್ಯ ಅಲ್ಲಿದೆ....ಅಂಗೈನೆಲ್ಲಿಯಂತೆ ತನಗೆ ನಿಚ್ಚಳವಾಗಿ ಗೊತ್ತು ಕುಸುಮೆಯ ಗುಣ. ಸೌಂದರ್ಯಸುಗುಣಗಳು ಹೀಗೆ ಮೇಳವಿಸಿ ಬರುವುದು ಊಹೆಗೆ ಮೀರಿದ ಪವಾಡ ಎಂದು ತಾನೇ ಹಿಂದೆ ಎಷ್ಟು ಬಾರಿ ಯೋಚಿಸಿರಲಿಲ್ಲ?....ಅಥವಾ ತನ್ನನ್ನು ಪರೀಕ್ಷಿಸುವ ಸಲುವಾಗಿ........ಅಥವಾ ಪರಿಹಾಸಕ್ಕಾಗಿಯೇ ಈ ಮಾತು ಹೇಳಿರಬಹುದೆ?....ಏನೇ ಇರಲಿ, ತನ್ನ ಅಭಿಪ್ರಾಯವೊಂದೇ:

ನಳನಳ ನಳಿಸುತ ಹೊಳೆವುದೊಂದ್ಹೊನ್ನೋಲೆ
ಹೊಳೆವುದೊಂದ್ಹೊನ್ನೋಲೆ ಭಗತಾಳಿ
ಹೊಳೆವುದೊಂದ್ಹೊನ್ನೋಲೆ ಭಗತಾಳಿ ಕುಸುಮಾಲೆ
ಜಾಣೆಗೂ ನಮಗೂ ಚಳಿಮಾವು

ಕಿವಿಯಲ್ಲಿ ಹೊನ್ನಿನ ಓಲೆಯನ್ನು ಹೊಳೆಸಿ ಕತ್ತಿನಲ್ಲಿ ಚಿನ್ನದ ತಾಳಿಯನ್ನು–ತಾನೇ ಕೊರಳುಮುಟ್ಟಿ ಕಟ್ಟಿದ್ದು—ಬೆಳಗಿಸಿ ಒಲೆಯುತ್ತ ಮನೆಮನಗಳನ್ನಲೆಯುವ ಚೆನ್ನಿಯನ್ನು ಅವನ ಮಾತಿನಲ್ಲೆ ವರ್ಣಿಸಬೇಕು.....ಅಕಾರಣವಾಗಿ ಅವಳನ್ನು ದ್ವೇಷಿಸುವ ತಾಯಿ ಕೂಡ ಒಪ್ಪಿಕೊಳ್ಳುತ್ತಾಳೆ ಸೊಸೆ ಚೆಲುವೆಯೆಂಬುದನ್ನು. ಆದರೆ,

ನಡುಗಣ ಕುಸುಮಾಲೆ ಕಣ್ಣಿಗೆ ಕರ ಚಲುವೆ
ಜೋಗಿ ಜಂಗಮುಗು ಒಲಿವಳು

—ಇಂತಹ ಮಾತನ್ನು ಮತ್ತೆ ಮತ್ತೆ ಕೇಳುವ ಕಿವಿ ಕಿವುಡಾದರೇ ಲೇಸು! ....ಎಂತಹ ಬಿರುನುಡಿ. ಇದಕ್ಕೆ ಏನು ಉತ್ತರ ಹೇಳಬೇಕು?....ತಾಯಿ ಹೇಳುವ ಹಾದಿಯಲ್ಲೆ ಹೋದರೂ ಸ್ವಲ್ಪ ವಿವೇಕ ಬಳಸಿಕೊಂಡರೆ ಆಕೆಯ ಸಂದೇಹ ಸವೆದೀತು....ತನ್ನ ನಚ್ಚಿನ ನಲ್ಲೆ ಅಂತಹವಳಾಗಿದ್ದರೂ—ಶಿವ ಶಿವ!–ತನ್ನ ಮನೆಯಲ್ಲಿ ಹೇಗೆ ಅಪಚಾರ ನಡೆದೀತು?

ಗುತ್ತಿ ಗುಡ್ಡದ ವ್ಯಾಲೆ ಕಟ್ಟಿಸಿದ ಮಠಗಳು
ಬೆಳ್ಳಿಕೋಲಿನ ತಳವಾರ
ಬೆಳ್ಳಿಕೋಲಿನ ತಳವಾರರಿರುವಂತೆ
ಇನ್ನಾರು ಮಠಕೆ ಬರುವೋರು

ಅದಕ್ಕೆ, ಬೇರೆ ರೂಪವಾಗಿ ಬಂದಿತು ತಾಯಿಯ ಉತ್ತರ:

ಹೂವ ಮುಚ್ಚಿಟ್ಟರು ಕಂಪು ತೇಲುವುದುಂಟು
ಮುಳ್ಳಿದ್ದರು ಕೊಯ್ವ ಜನರುಂಟು

—ಈ ಬಗೆಯಲ್ಲಿ ಮಾತನಾಡತೊಡಗಿದರೆ ಏನು ಉತ್ತರ ಹೇಳಬೇಕು? ವಾದಕ್ಕೆ ವಾದ, ಮಾತಿಗೆ ಮಾತು—ಅದನ್ನೆ ಯೋಚಿಸಬೇಕೆ ತಾಯಿ? ಒಮ್ಮೆ ಸರಳಬುದ್ಧಿಯಿಂದ ನಿಜಸ್ಥಿತಿಯನ್ನು ಅರಿತುಕೊಳ್ಳಲು ಯತ್ನಿಸ ಬಾರದೆ?....ಒಗಟು ಹೇಳಿ ಬಾಯಿ ಕಟ್ಟಿಸಿದಮಾತ್ರಕ್ಕೆ ನೇರ ಇದ್ದದ್ದು ಓರೆಯಾಗುತ್ತದೆಯೆ?....—ತನ್ನ ಮಗ ನೀರವವಾದುದನ್ನು ಗಮನಿಸಿದಳು ತಾಯಿ. ಸಮಯ ಹದವಾದುದೆಂದು ಮಗನ ಸನಿಹಕ್ಕೆ ಹೋಗಿ,

ಮುಳ್ಳಿದ್ದರು ಕೊಯ್ವ ಜನರುಂಟು ನನ ಮಗನೆ
ಹೇಳುತೇನೆ ಕೇಳು ಒಳಗುಟ್ಟು

ಎಂದು ಸಮಾಧಾನ ಹೇಳಿ, ಆತನ ಕಿವಿಯಲ್ಲಿ ಏನನ್ನೋ ಪಿಸುಗುಟ್ಟತೊಡ ಗಿದಳು........ರಾಯನ ಮುಖ ಬಣ್ಣವಿಳಿಯುತ್ತಿತ್ತು, ದೇಹ ಕಂಪಿಸು ತ್ತಿತ್ತು. ಅದೊಂದನ್ನೂ ಗಮನಿಸದೆ, ತಾಯಿ ತನ್ನ ಯೋಚನೆಯನ್ನೆಲ್ಲ ಅವನ ಕಿವಿಯಲ್ಲಿ ಸುರಿದಳು.

ತಾಯಿ ಮಗನ ಮಾತು ತಾಸೆಲ್ಲೊ ಸರಿದವು
ತಾರಕ್ಕಿ ಮೂಡಿ ಬಂದವು

—ಎಷ್ಟು ತಾಸು ಕಳೆದರೇನು, ಹೇಳಿದರೇನು, ಕೊನೆಯಲ್ಲಿ ಅದೇ........ ಅದೊಂದು ವಿಚಿತ್ರ ಅವಸ್ಥೆಯಲ್ಲಿ, ತಾಯಿಯನ್ನು ಬೀಳ್ಕೊಟ್ಟು ಮನೆಯೊಳಕ್ಕೆ ಬಂದ ರಾಯ....—ಅದೇಮಾತು!....ಸ್ಫಟಿಕ ಚಿತ್ತದ ಆ ಮುಗ್ಧೆಯನ್ನು ಪರೀಕ್ಷಿಸುವ ಹಟ ಈಕೆಗೆ....ಕತ್ತಲಲ್ಲಿ ಕೂಡ ತಡವಿಬಲ್ಲ ಆ ಹೆಣ್ಣಿನ ಮೈಯ್ ಮನಗಳು ಅಂಗುಲ ಅಂಗುಲ ಬಿಡದೆ ನಿಚ್ಚಳವಾಗಿ ಗೊತ್ತು ತನಗೆ! ಸಂಸಾರದಲ್ಲಿ ನಾಲ್ಕು ದಿನ ಒಂದೇ ತೆರನಾದ ಸುಖ ಇರಬಾರದೆಂಬುದೇ ಶಿವನ ಇಚ್ಛೆಯೇನೋ. ಅದಕ್ಕೇ ಹೆಣ್ಣಿಗೆ ಹೆಣ್ಣು ಮುನಿಯುವ ಈ ಬಗೆ ...ಆಗಲಿ, ಸತ್ಯವಿದ್ದರೆ ತನ್ನ ಚೆಲುವೆ ಯಾವ ದಿವ್ಯವನ್ನಾದರೂ ಎದುರಿಸಿ ನಿಂತಾಳು—ಎಂದು ತನಗೆ ತಾನೇ ಸಮಾಧಾನ ಮಾಡಿಕೊಂಡ ರಾಯ.

....ಈ ಪ್ರಸಂಗ ಕಳೆದು ಮೂರನೆಯ ಇರುಳು. ರಾಯಕುಸುಮಾಲೆಯರು ತಿಂಗಳಚೌಕಿಯಲ್ಲಿ ಎಂದಿನತೆ ಸರಸಸಲ್ಲಾಪ ನಡೆಸುತ್ತ ಕುಳಿತಿರಲು, ಹಲವುಬಾರಿ ಏನನ್ನೋ ಹೇಳಲೆತ್ನಿಸಿ ವಿಫಲನಾಗಿ ಮತ್ತೆ ಅದನ್ನು ಮರೆಯುಲೆತ್ನಿಸುತ್ತಿದ್ದ ರಾಯ ಕೊನೆಗೊಮ್ಮೆ ಯಾವುದೋ ಮಾತಿನ ಕಂಡಿಯಲ್ಲಿ, ಎತ್ತಲೋ ಮುಖ ತಿರುಗಿಸಿ ಹೇಳಿಬಿಟ್ಟ:

ಗೋವೆ ನಾಡಿನಾಗೆ ಗೆಣೆಯರು ಕರೆದಾರು
ಹೋಗಿ ಬರುತೇವೆ ಮನೆ ಜೋಕೆ
ಮನೆ ಜೋಕೆ ಮಠ ಜೋಕೆ ಕುಸುಮಾಲೆ ನೀ ಜೋಕೆ
ಹೋಗಿ ಬರುತೇವೆ ಬಲುಜ್ಯಾಗ

—ಇಂತಹ ಮಾತು ತಿಂಗಳಿಗೊಮ್ಮೆ ಬರುತ್ತದೆ. ರಾಯ ಸದಾ ತನ್ನ ಎದುರು ಮುರಿಮೀಸೆ ಮೆರೆಸುತ್ತಿರಬೇಕು ಎಂದು ಆಶಿಸುವ ಕುಸುಮಾಲೆ, ಅಂತಹ ವೇಳೆಯಲ್ಲಿ ಒಲ್ಲೆ ಎನ್ನಲಾರಳು. ತನ್ನಹಾಗಲ್ಲ ಆತ. ಗಂಡಸು. ಹೊರಗಿನ ಕಾರ್ಯವಿರುತ್ತದೆ. ಮನಸ್ಸಿಗೆ ನೋವಾದರೂ ನುಂಗಿಕೊಂಡು ಹೋಗಿಬನ್ನಿ ಎನ್ನಬೇಕು........' ಹೋಗಿಬನ್ನಿ' ಎಂದಳು ಕುಸುಮಾಲೆ; 'ಬೇಗ ಬನ್ನಿ' ಎನ್ನಲು ಮರೆಯಲಿಲ್ಲ.

....ರಾಯ ಗೋವೆಗೆಂದು ಹೊರಟು ಎರಡು ದಿನಗಳಾದವು. ನಿಡಿದಾದ ಎರಡು ಇರುಳುಗಳನ್ನು ತೆರವಾದ ಹರವು ಹಾಸಿಗೆಯಮೇಲೆ ಸುಯ್ಯುತ್ತ ಕಳೆದಳು ಕುಸುಮಾಲೆ. ಮೂರನೆಯದಿನ ಪ್ರಾತಃಕಾಲ:

ಉಪ್ಪರಿಗೆ ಒಳಗೆ ಹೋದಾಳು ಕುಸುಮಾಲೆ
ಹೂವಿನ ಸಿಬ್ಬಲೆ ಬಲಗೈಲಿ
ಹೂವಿನ ಸಿಬ್ಬಲ ಬಲಗೈಯಾಗ್ಹಿಡಕೊಂಡು
ಹೂವಗೊಪ್ಪಲಿಗೆ ನಡೆದಳು

—ಇಂದುಮಾತ್ರವಲ್ಲ, ಪ್ರತಿದಿನ ಆಕೆಯ ದಿನಚರಿ ಇದು. ಬೆಳಕು ಹರಿಯುವಹೊತ್ತಿಗೆ ತಾನು ಎದ್ದು ಸ್ನಾನಮುಗಿಸಿ ಗರತಿಸಿಂಗರದಿಂದ ಚೆಲುವಾಗಿ, ಗಂಡನನ್ನು ವಿಚಾರಿಸಿಕೊಂಡು, ಗೌಡಿತಿಯರಿಗೆ ಮನೆವಾರ್ತೆಯ ಕಾರ್ಯಗಳನ್ನು ನಿಯಮಿಸಿ, ತಾನು ಹೂವಿನ ಸಿಬ್ಬಲು ಹಿಡಿದು ಹೊರಡುತ್ತಾಳೆ........ಮನೆಗೆ ತಾಗಿ ಕಣ್ಣು ಹಾಯುವ ಉದ್ದವೂ ಬೆಳೆದು ಕಂಗೊಳಿಸುವ ಹೂವಿನ ಕೊಪ್ಪಲು ಅದು. ಆಕೆ ನಿತ್ಯವೂ, ಗಿಡಗಿಡದ ಬಳಿಗೂ ಹೋಗಿ ಮೆಯ್ದಡವಿ ಮಾತನಾಡಿಸಿ, ಟೊಂಗೆಟೊಂಗೆಗಳ ಮೇಲೆ ಕುಳಿತು ಮುದ್ದುನುಡಿಯಾಡುವ ಬಗೆಬಗೆಯ ಹಕ್ಕಿಗಳನ್ನು ಆದರಿಸಿ ಮೃದುವಾಗಿ ನಗುತ್ತ ಹೂವಾಯತೊಡಗುತ್ತಾಳೆ.

ಹೂವಗೊಪ್ಪಲಿಗೆ ನಡೆದಳು ಕುಸುಮಾಲೆ
ಅತ್ತಲಿತ್ತಲ್ಲ ಸುತ್ತ್ಯಾಳು

ಇಲ್ಲಿ ಹೂ ಕೊಯ್ದು, ಅಲ್ಲಿ ನಿಂತು, ಮತ್ತೊಂದೆಡೆ ಮರಕ್ಕೆ ಮೆಯ್ಯಾನಿಸಿ ಸಣ್ಣ ದನಿಯಲ್ಲಿ ಶಿವಕೀರ್ತನೆಯನ್ನು ಹಾಡಿ—ನಡೆಯುತ್ತ ಆ ಹೂಗೊಪ್ಪಲಿನ ಸೆರಗಿಗೆ ಬಂದುಬಿಟ್ಟಿದ್ದಾಳೆ........ಅಲ್ಲಿಯೋ, ಮಲ್ಲಿಗೆಯ ಹೊದರುಗಳು ಅರೆಬಿರಿದ ಹೂವನ್ನು ಮೆಯ್ತುಂಬ ಮುಡಿದುಕೊಂಡು ಮದುವಣಗಿತ್ತಿಯರಂತೆ ತಲೆತಗ್ಗಿಸಿ ನಿಂತಿದ್ದಾವೆ.

ಅತ್ತಲಿತ್ತಲ್ಲ ಸುತ್ತ್ಯಾಳು ಕುಸುಮಾಲೆ
ಅಚ್ಚಮಲ್ಲಿಗೆಯ ನೆನೆಗೊಯ್ದು

—ನನಗೊಯ್ದು ಮುಡಿ ತುಂಬಿಕೊಂಡಳು. ಮುಡಿ ಗಿಡಿದಿರಲು ಮಡಿಲು ತುಂಬಿಕೊಂಡಳು. ಮಡಿಲು ಸಾಲದಾಗಲು ಸಿಬ್ಬಲಿಗೆ ಸುರಿದಳು. ಎಲ್ಲವೂ ತುಂಬಿಹೋಯಿತು. ಕುಸುಮಾಲೆ ಕುಸುಮಾಂಗಿಯಾದಳು...... ಹೂವಾಯುತ್ತ ಹೊರಟಂತೆ ಹೊತ್ತು ತಿಳಿಯಲಿಲ್ಲ. ನೇಸರು ಎದುರಿನ ಗುಡ್ಡದ ನೆತ್ತಿಯೇರಿಬಿಟ್ಟಿದ್ದಾನೆ. ಇನ್ನು ಮನೆಗೆ ಹಿಂತಿರುಗಬೇಕು...... ಮನೆಯಿಂದ ಎಷ್ಟುದೂರ ಬಂದುಬಿಟ್ಟೆ ಹೂವಾಯುತ್ತ—ಎಂದು ಯೋಚಿ

ಸಿದಳು ಕುಸುಮಾಲೆ. ಹಸಿರಿನ ಬೇಲಿ ಸೆರಗುಸುತ್ತಿರುವ ಹೂಗೊಪ್ಪಲಿನ ತುತ್ತತುದಿ ಅದು. ಬೇಲಿಯ ಬದಿಯಲ್ಲೆ, ಎದುರಿನಲ್ಲಿ ಹಾವಿನಂತಹ ತಿರುವುದಾರಿಯೊಂದು ಸುತ್ತಿಸುತ್ತಿ ಕೆಳಗಿಳಿಯುತ್ತದೆ.......ಊರುಬಿಟ್ಟು ಹೋಗಿ ಇನ್ನೂ ಮರಳದಿರುವ ಪತಿಯ ನೆನಪಾಯಿತೇನೊ ಕುಸುಮಾಲೆಗೆ, ಆ ದಾರಿಯತ್ತ ಕಣ್ಣು ಹೊರಳಿಸಿದಳು...........ಆಶ್ಚರ್ಯ! ಯಾರೋ ಬರುತ್ತಿದ್ದಾರೆ ಅತ್ತಣಿಂದ ಮೇಲೇರಿ ಏರಿ....ತನ್ನ ಪತಿಯೇನು?....ಛೆ, ಅಲ್ಲ!....ಯಾರೋ!—....ಕೊನೆಯಬಾರಿ, ಮರಳುವ ಮುನ್ನ ಹೂವಿನ ತೊಂಡಿಲೊಂದನ್ನು ಕೈಗೆತ್ತಿಕೊಂಡು—ಮತ್ತೆ ಹಾದಿಯತ್ತ ತಿರುಗಿ ನೋಡಿದರೆ....

ಅಚ್ಚಮಲ್ಲಿಗೆಯ ನನೆಗೊಯ್ವ ಹೊತ್ತೀಲಿ
ಅತ್ತಿಂದಲೊಬ್ಬ ಜೋಗಿ ಇಳಿದಾನು

—ಯಾರೋ ಎಂದಿದ್ದಳು. ಜೋಗಿ, ಕಾವಿಯುಟ್ಟು ಕಮಂಡಲು ಹಿಡಿದು ಭಿಕ್ಷೆಗೆ ಹೊರಟಿದ್ದಾನೆ....ಇತ್ತಲೇ ನೋಡುತ್ತಿದ್ದಾನೆ....ತನ್ನನ್ನೇ ನೋಡುತ್ತಿದ್ದಾನೆ....ಏನು ಕಂಡ ಇಲ್ಲಿ? ಯಾಕೆ ನಗುತ್ತಿದ್ದಾನೆ?....ಏಕಾಂಗಿಯಾಗಿರುವ ತನ್ನನ್ನು ತುಂಬುಜೌವನೆಯನ್ನು ಕಂಡು....ಎಂತಹ ಅಸಭ್ಯ! ಯಾವನೋ ರಾವಣ ಸನ್ಯಾಸಿ!–ತೀರ ಹತ್ತಿರ ಬಂದುಬಿಟ್ಟಿದ್ದಾನೆ.... ಹಾದಿಯನ್ನು ಬಿಟ್ಟು ಬೇಲಿಯ ಬಳಿ ಸಾರುತ್ತಿದ್ದಾನೆ. ತಮ್ಮಿಬ್ಬರ ನಡುವೆ ಈಗ ಬೇಲಿ ಮಾತ್ರ ಉಳಿದಿದೆ....ಮತ್ತೆ ನಗುತ್ತಾನೆ....ಮಾತ್ರವಲ್ಲ;....

ಅತ್ತಿಂದಲು ಜೋಗಿ ಇಳಿದಾನು ಕುಸುಮಾಲೆ
ಕಾಣುತಲ್ಲುಬ್ಬ ಕುಣಿಸ್ಯಾನು

—ಅಯ್ಯೋ! ಈ ದುಷ್ಟ ಏನು ಮಾಡಲೂ ಹೇಸುವವನಲ್ಲ....—ಮಧ್ಯೆ ಬೇಲಿಯಿದೆ—....ಬೇಲಿ ಎಷ್ಟರದು? ಈ ಧಾಂಡಿಗನಿಗೆ ಒಂದೇ ಕುಪ್ಪಳ....

ಅರಳುಮಲ್ಲಿಗೆಹೂವ ಚೆಲ್ಲಿ ಬೀರಾಡುತ
ಓಡಿಬಂದಳು ತನ್ನ ಅರಮನೆಗೆ

ಹೆಜ್ಜೆ ಕಿತ್ತುದೊಂದು ಗೊತ್ತು. ಮತ್ತೆ ಆಕೆಗೆ ಎಚ್ಚರ ತನ್ನ ಮನೆಗೆ ಬಂದು ನಿಂತಮೇಲೆ, ಉರಿಯುವ ಮುಖದಲ್ಲಿ ಬೆವರು ಚಿಮ್ಮುತ್ತಿರುವಂತೆ....ಅಂತೂ ಆ ಧೂರ್ತನಿಂದ ಬದುಕಿ ಬಂದುದಾಯಿತು. ಸಾಮಾನ್ಯನೇ ಆತ! ಆಕಾರ

ನೋಡಿದರೇ ಮೆಯ್ ಕಂಪಿಸುತ್ತದೆ....ಒಮ್ಮೆ, ಆ ನೀಚ ತನ್ನ ಹಿಂದೆಯೇ ಓಡಿ ಇಲ್ಲಿಗೂ ಬಂದರೆ?....ಮನೆಯಲ್ಲಿ ಅವರೂ ಇಲ್ಲ....—ಉಪಾಯ ಹೊಳೆಯಿತು.

ಓಡಿಬಂದಳು ತನ್ನ ಅರಮನೆಗೆ ಕುಸುಮಾಲೆ
ತಳವಾರನ ಬಳಿಗೆ ಕರಸ್ಯಾಳು
ತಳವಾರನ ಕರಸ್ಯಾಳು ಬಾರಿಕರ ಕರೆಸ್ಯಾಳು
ನೂರೊಂದು ಬಾಗಿಲವ ಜಡಿಸ್ಯಾಳು

—ಮನೆಯೊಳಿಗದ ಮೇಲ್ವಿಚಾರಕರನ್ನು ಕರೆಯಿಸಿ ನೂರೊಂದು ಬಾಗಿಲುಗಳನ್ನೂ ಭದ್ರಪಡಿಸಿಯಾಯಿತು.

ನೂರೊಂದು ಬಾಗಿಲವ ಜಡಿಸ್ಯಾಳು ಕುಸುಮಾಲೆ
ಇನ್ಯಾರು ಮಠಕೆ ಬರುವೋರು

‘ ಇನ್ಯಾರು ಮಠಕೆ ಬರುವೋರು ’—ಹಾಗೆ ಯೋಚಿಸಿದಳು ಕುಸುಮಾಲೆ. ಆದರೆ,

ಕಾವಿಕಂತೆಯ ಜೋಗಿ ಬಾಗಿಲಿಗೆ ಬಂದರೆ
ನೂರೊಂದು ಬಾಗಿಲವೇ ತೆರೆದವು

ಒಂದಾದಮೇಲೊಂದರಂತೆ ನೂರೊಂದು ಬಾಗಿಲುಗಳೂ ತೆರದವು. ಸಂಗಡವೇ ಆ ಧೂರ್ತ ಒಳನುಗ್ಗಿದ. ಹೊರಬಾಗಿಲುಗಳನ್ನೆಲ್ಲ ದಾಟಿ ಮನೆಯ ಹೊಸ್ತಿಲ ಬಳಿ ಬಂದು ನಿಂತ; ಸುಮ್ಮನೆ ನಿಲ್ಲಲಿಲ್ಲ—

ನೂರೊಂದು ಬಾಗಿಲವೇ ತೆರೆದವು ಆ ಜೋಗಿ
ಉರಿವ ಬಿಸಿಲೊಳಗೆ ಕುಣಿದನು
ಉರಿವ ಬಿಸಿಲೊಳಗೆ ಕುಣಿದನು ಈ ಮನೆಯ
ಪಡಿಯ ಕೊಡುವವರ ಸುಳಿವಿಲ್ಲ

ಇನ್ನೂ ಕಂಪಿಸುತ್ತಿದ್ದ ಹೃದಯವನ್ನು ಧೈರ್ಯದಿಂದ ಒತ್ತಿಡುತ್ತ ಮೇಲೆ ಕುಳಿತಿದ್ದ ಕುಸುಮಾಲೆ ಹೊರಕ್ಕಿಣುಕಿದಳು: ಬಾಗಿಲುಗಳೆಲ್ಲ ರೆಕ್ಕೆ ತೆರೆದು ನಿಂತಿವೆ, ಸೋತು ಉರುಳಿದ ಗರುಡ ಪಕ್ಷಿಗಳಂತೆ. ಕೂಗಿದರೆ ಒಬ್ಬ ಆಳೂ ಕಾಣಿಸನು....ಯಾವ ಮಾಟವಿದ್ದೀತು?....ಈಗ ಏನು ಮಾಡುವುದು? ....ಆತನಿಗೆ ತಕ್ಕ ಪ್ರಾಯಶ್ಚಿತ್ತ ಮಾಡಿಸಿ ತಿರುಗುವ ದಾರಿ ತೋರಿಸುವುದೆ? ಅಥವಾ, ಹಾಗೆ ಮಾಡುವುದು ಯೋಗ್ಯವಲ್ಲ....ಕಷ್ಟವೂ ಹೌದು. ಕಾವಿ

ತೊಟ್ಟು ನಾಗಪಾತ್ರೆ ಹಿಡಿದು ಭಿಕ್ಷೆ ಕೇಳುತ್ತಿದ್ದಾನೆ. ಒಲ್ಲೆ ಎಂದು ಕಳು ಹಿದರೆ ಮನೆಗೆ ಕುಂದು ಬಂದೀತು....—ತನ್ನ ಸಿಟ್ಟನ್ನು ತಾನೇ ನುಂಗಿ ಕೊಂಡಳು ಕುಸುಮಾಲೆ. ಮತ್ತೊಮ್ಮೆ ಹೊರಗಿಣುಕಿದಳು. ಉರಿವ ಬಿಸಿಲಿನಲ್ಲಿ, ಪಡಿಕೊಡುವನರಿಲ್ಲ ಎಂದು ಕೂಗುತ್ತ ಕುಣಿಯುತ್ತಲೇ ಇದ್ದ ಆತ....

ಮುಮ್ಮಾಳಿಗೆಯಿಂದ ಕೇಳ್ಯಾಳು ಕುಸುಮಾಲೆ
ಗೌಡೇರ ಕರೆದು ಬೆಸಗೊಂಡ್ಲು
ಗೌಡೇರ ಕರೆದು ಬೆಸಗೊಂಡೇನೆಂದಾಳು
ಜೋಗಿಗೆ ಪಡಿಯ ಕೊಡಹೋಗಿ

ಕುಸುಮಾಲೆ ಅಷ್ಟು ಹೇಳಿದುದೇ ತಡ;

ಅಷ್ಟೆಂದ ಮಾತ ಕೇಳ್ಯಾರು ಗೌಡೇರು
ಮುಚ್ಚಳತುಂಬಿ ಹೊನ್ನ ಮೊಗೆದಾರು
ಮುಚ್ಚಳತುಂಬಿ ಹೊನ್ನ ಮೊಗೆದು ಕೊಂಡೊಯ್ದರು
ಇವ ಕೊಳ್ಳೊ ಜೋಗಿ ಪಡಿಗಳ

ಆ ಮನೆಯ ಪದ್ಧತಿಯೇ ಹಾಗೆ–ಕೊಡುವುದು ಪಡಿಹೊನ್ನು. ಅದಾದರೂ ಅರ್ಧ ಕೊಟ್ಟು ತಿಳಿಯದು. ಮುಚ್ಚಳ ತುಂಬ ಮೊಗೆದು ಸುರಿಯುವ ರೂಢಿ ...—'ಇವಕೊಳ್ಳೊ ಜೋಗಿ' ಎಂದು ಗೌಡೆಯರು ಪಡಿಕೊಡ ಹೋದರೆ ಆ ಜೋಗಿ ಹೇಳುತ್ತಾನೆ:

ನೀವು ಕೊಟ್ಟ ಪಡಿಯ ಮುಟ್ಟಂಥ ಜೋಗ್ಯಲ್ಲ
ಅಚ್ಚ ಮುತ್ತೈದೆ ಮನೆಯೊಳು
ಅಚ್ಚ ಮುತ್ತೈದೆ ಮನೆಯೊಳು ಕುಸುಮಾಲೆ
ಆಕೆಗೂ ನಮಗೂ ಚಳಿಮಾವು

—ಮುಮ್ಮಾಳಿಗೆಯಲ್ಲಿ ಕುಳಿತು ಈ ಮಾತುಗಳನ್ನು ಕೇಳಿದ ಕುಸುಮಾಲೆ ಅಪ್ರತಿಭಳಾದಳು. 'ಕುಸುಮಾಲೆ!'—ಈ ಹೆಸರು ಆತನಿಗೆ ತಿಳಿದಿತು ಹೇಗೆ? 'ಆಕೆಗೂ ನಮಗೂ ಚಳಿಮಾವು!'—ತನ್ನ ಪತಿ ದಿನಕ್ಕೊಮ್ಮೆ ಯಾದರೂ ಹೇಳುವ ಮಾತು ಇದು. ಇವೆಲ್ಲ ಈ ಕಾವಿಕಂತೆಯ ಜೋಗಿಗೆ ಹೇಗೆ ತಿಳಿದವು?....ಸಾಮಾನ್ಯನಲ್ಲ ಈ ತಿರುಕ....ಪಡಿಕೊಡದೆ ಕಳುಹಿದರೆ ಮನೆಗೆ ಕುಂದು; ಇನ್ನು, ತಾನೇ ಕೊಡಹೋದರೆ ರಾವಣ ಸನ್ಯಾಸಿಗೆ ಪಡಿ

ಕೊಟ್ಟಂತೆ....--ಏನೇ ಆಗಲಿ, ಪಡಿಕೊಟ್ಟು ಕಳುಹುವುದೇ ಉಚಿತ. ಕಲ್ಮಷ ಕಾಣದ ತನ್ನ ಪಾತಿವ್ರತ್ಯಕ್ಕಿಂದು ಒಂದು ಪರೀಕ್ಷೆ ಬಂದಿದೆ. ಅದನ್ನು ಧೈರ್ಯದಿಂದ ಎದುರಿಸಿ ಗೆಲ್ಲಬೇಕು....—ಗೌಡೆಯರು ತುಂಬಿ ಮೊಗೆದ ಹೊನ್ನನ್ನು ಹಿಂದೆಯೇ ಕೊಂಡೊಯ್ದರು....ಆ ಜೋಗಿ ಒದರುತ್ತಲೇ ಇದ್ದ.

ಮುಮ್ಮಾಳಿಗೆಯಿಂದ ಕೇಳ್ಯಾಳು ಕುಸುಮಾಲೆ
ಮುಚ್ಚಳ ತುಂಬಿ ಹೊನ್ನ ಮೊಗೆದಾಳು
ಮುಚ್ಚಳ ತುಂಬಿ ಹೊನ್ನ ಮೊಗೆದು ಕೊಂಡೊಯ್ದಾಳು
ಇವ ಕೊಳ್ಳೊ ಜೋಗಿ ಪಡಿಗಳ

ಮನೆತನದ ಮರ್ಯಾದೆಯ ಮೇಲೆ ಕಣ್ಣಿಟ್ಟು, ತನ್ನ ಭಯವನ್ನು ಒತ್ತರಿಸಿ ಕುಸುಮಾಲೆ ಸ್ವತಃ ಭಿಕ್ಷೆ ನೀಡಲು ನಡೆದಳು. ಒಳಬಾಗಿಲಿನ ಹೊಸತಿಲ ಹಿಂಭಾಗದಲ್ಲಿ ನಿಂತು ತೆಗೆದುಕೊ ಎಂದು ನೀಡಿದಳು. ಅಷ್ಟು ಬೇಗ ಕೊಟ್ಟ ಪಡಿಯನ್ನು ಕೊಂಡುಹೋಗುವ ಜೋಗಿಯೆ ಆತ?........

ಅಲ್ಲಿ ಕೊಟ್ಟ ಪಡಿಯ ಮುಟ್ಟಂಥ ಜೋಗ್ಯಲ್ಲ
ಇನ್ನೊಂದ್ಹೊಸ್ತಿಲನಿಳಿದರೆ

ಇನ್ನೊಂದು ಹೊಸ್ತಿಲು ಇಳಿದು ನೀಡಿದರೆ ಕೊಳ್ಳುವನೇನು?....ಪಡಿ ಕೊಳ್ಳುವ ಮಾತೇ ಮರೆತು ಹೋಯಿತು ಆತನಿಗೆ.

ನನ್ನ ಜೋಳಿಗೆಲೊಂದು ಪಟ್ಟೆ ಸೀರೆಯುಂಟು
ಉಡುವ ಜಾಣೆರಿಗೆ ಕೊಡುತ್ತೇನೆ

—ತಾನು ಯೋಚಿಸಿದುದಕ್ಕಿಂತ ಮಿಗಿಲಾದ ಧೂರ್ತ ಈತ!....ಹೊಗೊಪ್ಪ ಲಲ್ಲಿ ಅಡ್ಡಿ ಬಂದ; ಭಿಕ್ಷೆಯ ನೆಪದಿಂದ ಇಲ್ಲಿಗೂ ಹಿಂಬಾಲಿಸಿದ. ಭಿಕ್ಷೆ ಕೊಟ್ಟು ಕಳುಹಬಂದರೆ....ಎಂತಹ ಮಾತುಗಳು....ಒಂದೊಂದು ಮಾತಿ ನಲ್ಲೂ ತನ್ನ ನೀಚ ಕಾಮನೆಯನ್ನು ನಿರ್ಲಜ್ಜವಾಗಿ ವ್ಯಕ್ತಪಡಿಸುತ್ತಿದ್ದಾನೆ ....ಒಮ್ಮೆ, ತನ್ನ ಕೊರಳಿನ ತಾಳಿಯನ್ನಾದರೂ ನೋಡಿ ಹಿಂದಿರುಗ ಬಾರದಿತ್ತೆ?....ಇರಲಿ.

ಪಟ್ಟೆಯ ಸೀರೆಗೆ ಇಲ್ಲಿ ಯಾರಿಗೆ ಬರನೋ
ಪುರುಷರ್ಹ್ಯೋಗ್ಯೆದಾರೆ ಗೋವೆಗೆ
ಪುರುಷರ್ಹ್ಯೋಗ್ಯೆದಾರೆ ಗೋವೆಗೆ ಬಂದರೆ
ಪಟ್ಟೆ ಸೀರೆಗೆ ಬರನೇನೊ

ತನ್ನ 'ಪುರುಷ'ರ ಸುದ್ದಿ ಹೇಳಿದರಾದರೂ ಆತ ಹಿಂದಿರುಗಿಯಾನು ಎಂದು ಆಕೆ ಯೋಚಿಸಿದಳು....ಆತ ತನ್ನ ಮಾತು ಇನ್ನೂ ಅಸ್ಪಷ್ಟವೇ ಆಯಿತೆಂದು ಭಾವಿಸಿರಬೇಕು. ಈ ಬಾರಿ ಸ್ಪಷ್ಟವಾಗಿಯೇ ಹೇಳಿದ:

ಅಲ್ಲಿ ಕೊಟ್ಟ ಪಡಿಯು ಮುಟ್ಟಂಥ ಜೋಗ್ಯಲ್ಲ
ಇನ್ನೊಂದ್ಹೊಸ್ತಿಲನಿಳಿದರೆ
ಇನ್ನೊಂದ್ಹೊಸ್ತಿಲನಿಳಿದು ಪಡಿ ಕೊಟ್ಟರೆ
ಪುತ್ರರ ಸಂತಾನವ ಕೊಡುತೇನೆ

—ಛೆ! ಛೆ!....ಇದಕ್ಕಿಂತ ನಿರ್ಲಜ್ಜೆ ಸಾಧ್ಯವೆ?–ಕೇಳಿ ಕಿವಿಮುಚ್ಚಿಕೊಂಡಳು ಕುಸುಮಾಲೆ, ಜುಗುಪ್ಸೆ ನಾಚಿಕೆಗಳಿಂದ ನೀರವಳಾದಳು.... ಅವಳ ಮೌನ ಈ ಜೋಗಿಗೆ ಇನ್ನಷ್ಟು ಪ್ರಚೋದನೆ ಕೊಟ್ಟಿರಬೇಕು. ಮತ್ತೊಮ್ಮೆ ಹುಬ್ಬು ಹಾರಿಸಿ ಮುಗುಳು ನಕ್ಕ....ಕುಸುಮಾಲೆಗೆ ಅಸಹ್ಯವಾಯಿತು. ತಾನು ಮೌನಳಾಗಿ ನಿಂತರೆ ಮತ್ತೇನಾದರೂ ಆದೀತು! ಅವನಂತೆ ತಾನೂ ನಿರ್ಲಜ್ಜಳಾಗಬೇಕು ಇಲ್ಲಿಂದ ಪಾರಾಗಲು.

ಪುತ್ರರ ಸಂತಾನಕೆ ಇಲ್ಲಿ ಯಾರಿಗೆ ಬರನೊ
ಪುರುಷರ್ಹ್ಹೋಗ್ಯೆದಾರೆ ಗೋವೆಗೆ
ಪುರುಷರ್ಹ್ಹೋಗ್ಯೆದಾರೆ ಗೋವೆಗೆ ಬಂದರೆ
ಪುತ್ರರ ಸಂತಾನಕೆ ಬರನೇನೊ

ಆತನ ಮುಂದಿನ ಮಾತುಗಳನ್ನು—ಅವು ಇನ್ನೆಷ್ಟು ಹೀನ ಇರಬೇಡ— ಕೇಳಲು ಅಲ್ಲಿ ನಿಲ್ಲಲಿಲ್ಲ. ಕುಸುಮಾಲೆ ಒಳಗೆ ಓಡಿದಳು....

....ಒಳಮಾಳಿಗೆಯ ಕೋಣೆಯಲ್ಲಿ ಕುಳಿತು ತಾಸಿಗೊಮ್ಮೆ ಗೌಡಿತಿಯರನ್ನು ಕರೆದು ಕೇಳುತ್ತಿದ್ದಳು, ನೀಚ ತೊಲಗಿದನೆ—ಎಂದು....ನೀಚ ತೊಲಗಲಿಲ್ಲ. ಸಂಜೆಯಾಯಿತು. ಇನ್ನು ಕತ್ತಲೆ ಕಾಲಿಡುತ್ತದೆ. ರಾತ್ರಿಯೆಲ್ಲ ಈ ಬಗೆಯ ಭೀತಿಯಿಂದ ಜಾಗರಣೆ ಮಾಡುತ್ತ ಕುಳ್ಳಿರುವುದೆ?.... ಈ ವೇಳೆಗಾದರೂ ಆತನಿಗೆ ಅರಿವಾಗಿರಬಹುದು, ತನ್ನ ದುಷ್ಟ ಕಾಮನೆ ಈಡೇರದೆಂದು. ಒಮ್ಮೆ, ಈಗ ಹೋಗಿ ಪಡಿಕೊಟ್ಟು 'ದಯಮಾಡಿಸು' ಎಂದರೆ, ಆ ನೀಚ ಹಾದಿ ಹಿಡಿಯಬಹುದು....—ಮತ್ತೊಮ್ಮೆ ಪಡಿಕೊಂಡು ಬಾಗಿಲಬಳಿ ಹೋದಳು ಕುಸುಮಾಲೆ. ಈ ಬಾರಿ ಹೊಸ್ತಿಲ ಹಿಂದೆ ನಿಲ್ಲದೆ ಧೈರ್ಯಮಾಡಿ ಕೆಳಗಿಳಿದು ಪಡಿ ನೀಡಿದಳು... ಆತನ ಹೇಳಿಕೆಯಂತೆಯೇ

ಆಯಿತಲ್ಲ, ಇನ್ನೇನು ಆಕ್ಷೇಪ—ಎಂದು ಆಕೆ ಯೋಚಿಸಿದಳು........ಆ ಧೂರ್ತನಿಗೆ ನೆವ ಹೇಳಿಕೊಡಬೇಕೇ?

ಹೊತ್ತು ಹೋದವು ಹೊರಗೆ ಬೈಗಾದವು
ಹೊಸ್ತಿಲ ಗುರುತೆ ತಿಳಿಯದು

ಹೊಸ್ತಿಲು ಕಾಣಿಸಿದರಲ್ಲವೆ—ಆಕೆ ಹೊರಗೆ ನಿಂತು ಪಡಿಕೊಡುತ್ತಿರುವಳೊ ಇಲ್ಲವೊ ಎಂಬುದು....ಅದಕ್ಕಾಗಿ, ಪಡಿ ಬೆಳಗಿಗೆ ಕೊಂಡರಾಯಿತು. ಈಗ,

ಹೊಸ್ತಿಲ ಗುರುತೆ ತಿಳಿಯದು ಕುಸುಮಾಲೆ
ಅಕ್ಕಿ ಕೂಡ ಅಕ್ಕಿ ತೊಳೆದಿಡೆ

ಊಟಕ್ಕೆ ಅಣಿಮಾಡಿಬಿಟ್ಟಮಾತ್ರಕ್ಕೆ ಸಾಲದು. ದೇಹಕ್ಕೆ ದಣಿವಾಗಿದೆ.

ಅಕ್ಕಿಕೂಡ ಅಕ್ಕಿ ತೊಳೆದಿಡೆ ಕುಸುಮಾಲೆ
ನೀರಿನ ಕೂಡ ನೀರ ಹದಮಾಡೆ

ಬಿಸಿನೀರು ಮಿಂದು, ಊಟಮಾಡಿ, ಅನಂತರ?....

ಗಂಡನುಣ್ಣುವ ಹರಿವಾಣ ಬೆಳಗಿಡೆ
ಗಂಡನ ಮಂಚ ಕುಡಿಗ್ಹಾಸೆ
ಗಂಡನ ಮಂಚ ಕುಡಿಗ್ಹಾಸೆ ಎಂದ್ಹೇಳಿ
ಬಾಗಿಲಿಗಡ್ಡ ಮಲಗ್ಯಾನು

ಮುಗಿದು ಹೋಯಿತು! ಇನ್ನೇನು ಮಾಡುವುದೂ ಸಾಧ್ಯವಿಲ್ಲ....ಅಲ್ಲಿ ಕ್ಷಣವೂ ನಿಲ್ಲಲಿಲ್ಲ ಕುಸುಮಾಲೆ. ಒಳಗೆ ಓಡಿದಳು. ಉಪ್ಪರಿಗೆ ಏರಿದಳು ....ಮನೆಯ ಹಿಂಭಾಗದಲ್ಲಿ ಒಂದು ದೊಡ್ಡ ಅರಳಿಯ ಮರ. ಅದರ ಕೊಂಬೆಗಳು ಉಪ್ಪರಿಗೆಯ ಕಿಟಕಿಗೆ ಬಂದು ತಾಗಿದ್ದಾವೆ.

ಉಪ್ಪರಿಗೆ ಒಳಗೆ ಹೋದಳು ಕುಸುಮಾಲೆ
ಅಳ್ಳೀಯ ಮರನ ತಲೆಗೇರಿ
ಅಳ್ಳೀಯ ಮರನ ತಲೆಗೇರಿ ಕುಸುಮಾಲೆ
ಅತ್ತೆಮ್ಮನರಮನೆಗೆ ಹೋದಳು

—ಧೀರೆ. ಕಷ್ಟ ಬಂದಿತೆಂದು ಕಾಲುಗೆಡಲಿಲ್ಲ....ಚಾತುರ್ಯದಿಂದ ಅತ್ತೆಯ ಬಳಿಗೆ ಹೋದಳು.

ಅತ್ತೆಮ್ಮನರಮನೆಗೆ ಹೋದಳು ಕುಸುಮಾಲೆ
ಅತ್ತೆಮ್ಮನ ಕರೆದು ಬೆಸಗೊಂಡ್ಳು
ಅತ್ತಿಂದಲೊಬ್ಬ ಕಟ್ಟ ಜೋಗಿ ಬಂದ

ಇಕ್ಕಿದರೂ ಒಲ್ಲ ಪಡಿ ಒಲ್ಲ
ಇಕ್ಕಿದರೂ ಒಲ್ಲ ಪಡಿ ಒಲ್ಲ ಅತ್ತೆಮ್ಮ
ನೀವೊಂದರೆಚಣ ಬರಬೇಕು

....ಕುಸುಮಾಲೆ ಊಹಿಸಿದಂತೆ, ಅತ್ತೆ ಗಾಬರಿಯಾಗಲಿಲ್ಲ, ಹಾತೊರೆದು ಸುದ್ದಿ ಕೇಳಲಿಲ್ಲ, 'ನಡೆ ಹೋಗೋಣ' ಎಂದು ತನ್ನನ್ನೂ ದೂಡಿಕೊಂಡು ಧಾವಿಸಲಿಲ್ಲ. ಬದಲು, ಯಾವುದ್ದೋ ಸಾಮಾನ್ಯ ವಿಷಯವೆಂಬಂತೆ ಉದಾಸೀನಳಾಗಿ ಹೇಳಿದಳು :

ಪಡಿ ಒಲ್ಲೆನೆಂದರೆ ಹಾಲು ಬೋನನಿಕ್ಕು
ಇರುಳೆಂದರೆ ಹಾಸ ಕುಡಿಗ್ಗಾಸು

ಕುಸುಮಾಲೆಗೆ ಆಶ್ಚರ್ಯವಾಯಿತು....ಏಕೆ ಹೀಗನ್ನುತ್ತಿದ್ದಾರೆ ಅತ್ತೆ ?.... ಏನೋ; ಅದನ್ನೆಲ್ಲ ಯೋಚಿಸುತ್ತ ಕುಳಿತರೆ....ಮತ್ತೆ ಕುಸುಮಾಲೆ ದೀನಳಾಗಿ ಆ ಜೋಗಿಯ ದೌಷ್ಟ್ಯವನ್ನು ಬಣ್ಣಿಸಿ ಹೇಳಿದಳು. ನಿಸ್ಸಹಾಯಕಳಾಗಿ ಸೆರಗುಚೆಲ್ಲಿ ಬೇಡುವಂತೆ ಹೇಳಿದಳು :

ಇಕ್ಕಿದರೂ ಒಲ್ಲ ಪಡಿ ಒಲ್ಲ ಪಾಪಿಯ
ಅಟ್ಟಲರೆಚಣ ಬರಬೇಕು

ಆಕೆಯ ದೈನ್ಯ ಅತ್ತೆಯನ್ನು ಕರಗಿಸಲಿಲ್ಲ. ಬದಲು, ಆಕೆ ಕುಸುಮಾಲೆಗೆ ಮತ್ತೆ ಉಪದೇಶ ಮಾಡಿದಳು :

ಕಾವಿಕಂತೆಯ ಜೋಗಿ ಪಡಿಕೊಳ್ಳ ಬಂದರೆ
ಅಟ್ಟ ಕಳುಹುವುದು ತರವಲ್ಲ
ಪಡಿ ಒಲ್ಲೆನೆಂದರ ಹಾಲು ಬೋನನಿಕ್ಕು
ಇರುಳೆಂದರೆ ಹಾಸ ಕುಡಿಗ್ಗಾಸು

....ಯಾಕೋ, ವೇಳೆ ಸಮನಿಲ್ಲ. ಆಸರೆಗೆಂದು ಮುಟ್ಟಹೋದುದೆಲ್ಲ ಹಿಂದೆ ಸರಿಯುತ್ತದೆ....ಅತ್ತೆಯ ಕೂಡ ಇನ್ನು ಏನು ಹೇಳಬೇಕು ?....ಚುಟಕದಲ್ಲಿ ಉಪದೇಶ ಮುಗಿಸಿ ಇಲ್ಲಿಂದ ತನ್ನನ್ನು ನಿವಾರಿಸಿದರೆ ಸಾಕೆನ್ನುವ ಭಾವ ಆಕೆಯ ದನಿಯಲ್ಲೆ ತೋರುತ್ತದೆ....ಮತ್ತೆ ಅಲ್ಲಿ ನಿಲ್ಲಲಿಲ್ಲ ಕುಸುಮಾಲೆ.

ಸರ್‍ರಂತ ಹೋದಳು ಸುಯ್ಯಂತ ಬಂದಳು
ಅರಳಿ ಮರನೇರಿ ಇಳಿದಳು
ಅರಳಿ ಮರನೇರಿ ಇಳಿದಳು ಕುಸುಮಾಲೆ

ಗರಗರನೊಂದೋಲೆ ಬರೆದಳು
ಗರಗರನೊಂದೋಲೆ ಬರೆದಳು ಅಣ್ಣಯ್ಯ
ತಡಮಾಡದೊಡನೆ ಬರಬೇಕು
ತಡಮಾಡದೊಡನೆ ಬರಬೇಕು ಬರದಿದ್ರೆ
ತಂಗಿ ಸತ್ತಳೆಂದು ತಿಳಿಬೇಕು

....ಇರುಳಿನ ಎರಡು ಯಾಮ ಈಗಲೇ ಕಳೆದು ಹೋಗಿದೆ....ಅಣ್ಣ ಸೂರ್ಯನ ಊರು ಇಲ್ಲಿಗೆ ಆರು ಗಾವುದ ದೂರ....ಇದ್ದವರಲ್ಲೆ ಎದೆಗಾರರಾದ ಇಬ್ಬರು ಗೌಡಿತಿಯರನ್ನು ಕರೆದು ಓಲೆಕೊಟ್ಟು ಅಣ್ಣನಿಗೆ ಕಳುಹಿದಳು....

....ಆ ಜೋಗಿ ಮನೆಯ ಹೊಸ್ತಿಲು ಬಿಟ್ಟು ಏಳಲಿಲ್ಲ. ಹಗಲೇ ಅಷ್ಟು ಮಾಡಿದವ ಇನ್ನು ಇರುಳು ಏನು ಮಾಡುವನೋ!....ಈಗ ಏನೋ ಒಂದು ಬಗೆಯ ಒರಟು ಧೈರ್ಯ ಬಂದುಬಿಟ್ಟಿತು ಕುಸುಮಾಲೆಗೆ. ಆಗುವುದೆಲ್ಲ ಆಗಲಿ....ಹೆದರಿ ಹಿಂಜರಿದೆನೆಂದು ಆಗುವುದು ಆಗಬೇಕಾದ್ದು ಆಗದಿರುತ್ತದೆಯೆ?....–ಎಲ್ಲಕ್ಕೂ ಸಿದ್ಧಳಾಗಿದ್ದಳು ಕುಸುಮಾಲೆ....ಮಹಡಿಯ ತೊಲೆಯ ತೂಗುಮಂಚದ ಬೆಳ್ಳಿಯ ಕೊಂಡಿಗೆ ನೇಣು ಬಿಗಿದು ಅಣಿಮಾಡಿಕೊಂಡಿದ್ದಳು, ಯಾವ ಕ್ಷಣದಲ್ಲಿಯಾದರೂ ಆ ನೀಚ ಒಳನುಗ್ಗಿ ಬಂದಾನೆಂದು....

....ಚಿತ್ತ ತೆರವಾಗಿರಲು, ಕಣ್ಣು ಬೆಳ್ಳಿಯ ಕೊಂಡಿಯ ನೇಣಿನ ಮೂಲಕ ಅದರಾಚೆಯನ್ನು ನೋಡುತ್ತಿರಲು, ಕಿವಿ ಕೆಳಗೆ ಹೊಸ್ತಿಲತ್ತ ನಟ್ಟಿರಲು। ನೆರೆ ಬಂದ ಹೊಳೆಯನ್ನು ಬೆರಳುದಪ್ಪದ ಸಂಕದಮೇಲೆ ದಾಟುವವಳಂತೆ। ಕ್ಷಣಕ್ಷಣವನ್ನೂ ಅತಿಕಷ್ಟದಿಂದ ದಾಟುತ್ತಿದ್ದಳು....

....ಹೀಗೆಯೇ ಇರುಳೆಲ್ಲ ಜಾಗರವಾಯಿತು....ಇನ್ನೇನು ಬೆಳಕು ಹರಿಯುತ್ತದೆ. ಚುಮು ಚುಮು ನಸುಕು. ಹೊರಗೆ ಹೊಗೊಪ್ಪಲಿನಲ್ಲಿ ಹಕ್ಕಿಗಳು ಎಚ್ಚರುಗೊಳ್ಳುತ್ತಿವೆ....ಅಷ್ಟರಲ್ಲಿ, ಅದೇನೋ ದೂರದ ಸದ್ದು.... ಹತ್ತಿರವಾಗುತ್ತಿದೆ....ತೀರ ಸಮೀಪಕ್ಕೇ ಬಂದಿತು....ಏನಾದರೂ ಕುಸುಮಾಲೆಗೆ ಕುಳಿತಲ್ಲಿಂದ ಕದಲಲು ಮನವಾಗದು....ಜನರ ಗುಂಪು ಮನೆ ಬಾಗಿಲಿಗೆ ಬಂದಂತೆ ತೋರುತ್ತದೆ. ಯಾರೋ ಮಹಡಿ ಏರಿ ಮೇಲಕ್ಕೆ

ಬರುತ್ತಿದ್ದಾರೆ....ಮತ್ತೊಂದರೆಚಣದಲ್ಲಿ ಕುಸುಮಾಲೆಯ ಅತ್ತೆ ಎದುರು ನಿಂತಿದ್ದಳು.

....ಇದೇನು ನಡೆಯುತ್ತಿದೆ?....ಹೊರಗೆ ಏನು ಗದ್ದಲ? ಅತ್ತೆ ಏಕೆ ಬಂದು ನಿಂತಿದ್ದಾರೆ?....ಭಾವಗಳ ಪ್ರವಾಹದಲ್ಲಿ ಮುಳುಗಿಕೊಂಡೇ ಆಕೆ ನಿರ್ಭಾವ ಸ್ಥಿತಿಯನ್ನು ಅನುಭವಿಸಿದಳು ಒಂದು ಚಣ....ಪುನಃ ಚೇತರಿಸಿ ಕೊಂಡ ಮೇಲೆ, ಅತ್ತೆ ಕಣ್ಣು ತುಂಬಿ ತನ್ನನ್ನು ಅಪ್ಪಿಕೊಂಡು ಏನೇನೋ ಹೇಳಿ ರಂಬಿಸಿದ ಅನಂತರ ಕುಸುಮಾಲೆಗೆ ವಿಷಯ ತಿಳಿಯಿತು :

ಅಣ್ಣ ಸೂರ್ಯನ ದಂಡು ಸೂಸಾಡಿಬಂದವು
ಅತ್ತೆಮ್ಮನಲ್ಲಿ ಇಳಿದಳು

....ಕಾರಣ ತಿಳಿಯದೆ, ಆದುದೆಲ್ಲವನ್ನು ಸ್ಮರಿಸಲೂ ತೆರಪಿರದೆ ಕುಸುಮಾಲೆ ಅತ್ತೆಯ ಕೂಡ ತಾನೂ ಸುಮ್ಮನೆ ಅತ್ತಳು....ಹೆಂಗರುಳು ಹಗುರವಾದ ಮೇಲೆ ಅತ್ತೆ ಹೇಳಿದಳು :

ಪಟ್ಟೆ ಸೀರೆಸುಡೆ ಬಟ್ಟು ಮುತ್ತನೆ ಕಟ್ಟೆ
ಹೂವಿನ ಸಿಬ್ಬಲ ಬಲಗೈಲಿ
ಹೂವಿನ ಸಿಬ್ಬಲ ಬಲಗೈಯಾಗ್ಹಿಡಕೊಂಡು
ಅಣ್ಣ ಸೂರ್ಯನ ಎದುರಾಗೆ

....ಪಟ್ಟೆಯುಡಲಿಲ್ಲ ಕುಸುಮಾಲೆ. ಉಟ್ಟುದನ್ನೆ ಸಾವರಿಸಿಕೊಂಡಳು. ಮುಡಿಮೊಗಗಳನ್ನು ಸವರಿಕೊಂಡಳು. ಅತ್ತೆಯ ಕೂಡ ಅಣ್ಣನನ್ನೆದುರು ಗೊಳ್ಳಲು ಕೆಳಗಿಳಿದಳು........ಅಷ್ಟರಲ್ಲಿಯೇ ಹೊರಗೆ ಅಣ್ಣನ ದನಿ ಕೇಳಿಸುತ್ತಿತ್ತು:

ಮಳ್ಳೇನೊ ಭಾವಯ್ಯ ಮಂಕೇನೊ ಭಾವಯ್ಯ
ಇ ರೂಪ ನಿನಗೆ ನಿಜವೇನೋ

ಕುಸುಮಾಲೆ ಹೊರಗೆ ಧಾವಿಸಿದಳು ...

ಅಲ್ಲಿ—ತನ್ನ ಪತಿ ನಿಂತಿದ್ದನು. ಎದುರಿನಲ್ಲಿ ಜೋಗಿಯ ವೇಷಗಳು ಕಳಚಿ ಬಿದ್ದಿದ್ದವು....ಜೊತೆಯಲ್ಲಿ ತನ್ನ ಅಣ್ಣ. ತಾನು ಬಂದುದನ್ನು ಕಂಡು ಅರಳಿದ ಕಣ್ಣು, ಇನ್ನೂ ಅರಿವಾಗದ ರಹಸ್ಯವನ್ನು ಹುಡುಕುವಂತಿತ್ತು....

ಅಂತೂ ಕೊನೆಗೆ ಎಲ್ಲರ ಕಳವಳವೂ ಕಳೆಯಿತು. ಎಲ್ಲರಿಗೂ ನಿಜಸ್ಥಿತಿಯ ಅರಿವಾಯಿತು. ತನ್ನ ಪತಿಯೇ ವೇಷಧರಿಸಿ ಬಂದಿದ್ದನೆಂದು

ತಿಳಿದು ಕುಸುಮಾಲೆ, ನಡೆದುದನ್ನೆಲ್ಲ ನೆನೆದು ನಾಚಿಕೆಯಿಂದ ತಲೆತಗ್ಗಿಸಿದಳು ರಾಯನ ಸ್ಥಿತಿಯೋ—ಹೇಳುವಂತಿಲ್ಲ !

....ತಾಸು ತಾಸುಗಳು ಕಳೆದು, ಮನೆಯ ಉಬ್ಬರ ಇಳಿದ ಮೇಲೆ, ರಾಯ ನೀರವನಾಗಿ ತಲೆ ತಗ್ಗಿಸಿ ಕುಳಿತುಬಿಟ್ಟಿರಲು, ಅಪರಾಧವಾಯಿತೆಂದು ಗಂಡ ನೊಂದನೇನೋ ಎಂದು ಕುಸುಮಾಲೆ ಆತಂಕಗೊಂಡಿರಲು, ನಡುವೆ, ಅಣ್ಣ ನಗುತ್ತ ಹೇಳಿದ :

ನೀರಿನ ಕೊಡ ನೀರ ಹದವಯಡೆ ಕುಸುಮಾಲೆ
ಅಕ್ಕಿ ಕೂಡಕ್ಕಿ ತೊಳೆದಿಡೆ
ಅಕ್ಕಿ ಕೂಡಕ್ಕಿ ತೊಳಿದಿಡೆ ಭಾವಯ್ಯಗೆ
ಹಾಲಿನ ಕೊಡ ಹಾಲು ಹದವಾಡೆ

....ಹಾಲಿನ ಕೊಡ ಹಾಲು ಹದವಾಗಲು ಎಷ್ಟು ಹೊತ್ತು ಬೇಕು ?

# ೧೧. ಸೀರೆಯಿಂತಾದು ಸೀರೆನುಡುವಳೆಂಥವಳು

ಗ್ರಾಮಜೀವನದಲ್ಲಿನ ನೀತಿಬಾಹಿರ ಪ್ರಣಯವೊಂದರ ದುರಂತ ಕಥೆ ಇದು :

ಮಲೆನಾಡಿನ ಮಡಿಲಿನಲ್ಲಿರುವ ಒಂದು ಸುಂದರವಾದ ಹಳ್ಳಿಯದು. ಹಲವು ಕಸುಬಿನವರ ಹತ್ತಿಪ್ಪತ್ತು ಮನೆಗಳಿರುವ ಆ ಹಳ್ಳಿ ಅಲ್ಲಿಗೆ ದೊಡ್ಡದೆ. ಊರಿನ ಪಕ್ಕದಲ್ಲಿ ಹರಿಯುತ್ತಿರುವ ಒಂದು ಸಣ್ಣ ತೊರೆ ಆ ಹಳ್ಳಿಗೊಂದು ಸೊಗಸಿತ್ತಿದೆ. ಊರನ್ನು ತಾಯಿಯಂತೆ ಅಪ್ಪಿಕೊಂಡು ಸುತ್ತಲೂ ಹಸಿರಿನಿಂದ ಮೆರೆಯುವ ಕಾಡು; ಆ ಕಾಡುಗಳಾಚೆ ಅವುಗಳ ಸೆರಗಿಗೆ ಶಾಗಿ ತಲೆಯೆತ್ತಿ ನಿಂತಿರುವ ಹಸಿರು ಹೊದೆದ ಗುಡ್ಡಬೆಟ್ಟಗಳು. ಆ ಊರಿನ ಶ್ರೀಮಂತ ಕುಟುಂಬವೊಂದರಲ್ಲಿ— ಮುದುಕರಾದ ತಂದೆ ತಾಯಿ, ಇನ್ನೂ ನೂತನ ದಾಂಪತ್ಯಜೀವನದಲ್ಲಿ ಪದವಿಟ್ಟಿರುವ ಮಗ ಸೊಸೆ ಹೀಗೆ—ನಾಲ್ವರು ಉಣಲುಡಲು ಕೊರತೆಯಿಲ್ಲದೆ ಬಾಳು ನಡೆಸಿದ್ದಾರೆ. ಒಳಗಿನೊಳಗನ್ನು ಯಾರು ಬಲ್ಲರು? ಎದುರು ತೋರುವಂತೆ, ಊರಿನವರೆಲ್ಲ ಸೌಖ್ಯದ ಮನೆ ಎಂದು ಬೊಟ್ಟುಮಾಡಿ ಸೂಚಿಸುವಂತಹ ಕುಟುಂಬವದು.

ಹೀಗೆಯೇ ಇರುತ್ತಿರಲು ಒಂದು ದಿನ........

ಕಥೆ ಮೊದಲಾಗುತ್ತದೆ........

ಅತ್ತೆಮ್ಮ ನಮ್ಮ ನಿಮ್ಮ ಸೀರೆ ಮಾಸಿದವು

ಎಂದು ಸೊಸೆ ಮಾದೇವಿ ಅತ್ತೆಗೆ ಹೇಳುತ್ತಾಳೆ. ಅದಕ್ಕೆ ಅತ್ತೆ,

ಸೀರೆ ಮಾಸಿದರೆ ನಮ್ಮ ಮಡಿವಳಗ್ಹಾಕ್ಹೋಗೆ

ಎನ್ನುವಳು. ಅಲ್ಲಿಂದ ಸೊಸೆ ಮಾವನ ಬಳಿಗೆ ಬಂದು,

ಮಾವಯ್ಯ ನಿಮ್ಮ ಪಟ್ಟಿ ಮಾಸಿದವು

ಎನ್ನುತ್ತಾಳೆ, ಅವನ ಕೊಳೆಯಾದ ಪಟ್ಟೆಯನ್ನು ತೋರಿಸಿ. ಆತನೂ

ಪಟ್ಟಿ ಮಾಸಿದರೆ ನಮ್ಮ ಮಡಿವಳಗ್ಹಾಕ್ಹೋಗೆ

ಎನ್ನುತ್ತಾನೆ. ಅನಂತರ ಪತಿಯ ಬಳಿ ಬರುತ್ತಾಳೆ. ಅಲ್ಲಿ ಮಲಗುವ ಮಂಚದ ಮೇಲೆ ಮಾಸಿಬಿದ್ದಿರುವ ಹೊದೆಯುವ ಹಚ್ಚಡವನ್ನು ನೋಡಿ,

ರಾಯರೆ ರಾಯರೆ ನಿಮ್ಮ ಹಚ್ಚಡ ಮಾಸಿದವು

ಎನ್ನುತ್ತಾಳೆ.

ಹಚ್ಚಡ ಮಾಸಿದರೆ ನಮ್ಮ ಮಡಿವಳಗ್ಹಾಕ್ಹೋಗೆ

ಎನ್ನುತ್ತಾನೆ ಆತನೂ.

ಒಬ್ಬೊಬ್ಬರನ್ನು ಕೇಳುವಾಗಲೂ ಆಕೆಯ ಮುಖ ಏನೋ ರಹಸ್ಯವನ್ನು ತುಂಬಿಟ್ಟುಕೊಂಡಂತೆ ಅಳುಕುತ್ತಿತ್ತು. ಒಬ್ಬೊಬ್ಬರ ಉತ್ತರದಿಂದಲೂ, ಅದು ನಿತ್ಯದಂತಹದೇ ಉತ್ತರವಾದರೂ, ಆಕೆಯ ಮುಖ ಅರಳುತ್ತಿತ್ತು, ಕೆಂಪೇರುತ್ತಿತ್ತು, ಕಂಪಿಸುತ್ತಿತ್ತು.

....ಮನೆಯಿಂದ ಮಡಿವಳರ ಕೇರಿಗೆ ನಡೆದಳು ಮಾದೇವಿ. ಮನೆಯ ಮಡಿವಳನಾದ ಮಾಚಯ್ಯನ ಮನೆಯೆದುರು ನಿಂತಳು. ಅತ್ತ ಇತ್ತ ನೋಡಿ ಒಮ್ಮೆ ಹೆಸರು ಹಿಡಿದು ಕೂಗಿದಳು. ಮಾಚಯ್ಯ ಹೊರಬಂದ.... ಇನ್ನೂ ತರುಣ. ಮೂವತ್ತಕ್ಕೆ ಮೀರದ ವಯಸ್ಸು. ನಿತ್ಯದ ದುಡಿಮೆಯಿಂದ ದಷ್ಟಪುಷ್ಟವಾಗಿ ತುಂಬಿಕೊಂಡಿದ್ದ ದೇಹ. ನೀಳವಾದ ಕೂದಲನ್ನು ಚಂದವಾಗಿ ಬಾಚಿ ಮುಡಿಗಟ್ಟಿ ಹೂವು ಮುಡಿದಿದ್ದಾನೆ. ಮುಖಕ್ಕೆ ತುಂಬ ಒಪ್ಪವಾಗಿ ಹೊಂದಿಕೊಂಡು ಆತನ ಚೆಲುವನ್ನು ಇಮ್ಮಡಿಸಿದೆ ಕುಡಿಮೀಸೆ ....ಅವನು ಹೊಸಿತಿಲಲ್ಲಿ ಬರುತ್ತಿದ್ದಂತೆ ಮಾದೇವಿ ನಿಂತಲ್ಲಿಯೆ ಕಂಪಿಸಿದಳು. ಆತನನ್ನೆ ನೋಡಿದಳು, ತುಂಬ ವಿಚಿತ್ರವಾಗಿ. ಅವನೂ ಹಸನ್ಮುಖಿಯಾಗಿ ಈಕೆಯನ್ನೆ ಎವೆಯಿಕ್ಕದೆ ನೋಡಿದ. ಈ ಹರಯದ ಕಣ್ಣಿನ ಕರೆಯನ್ನು ಅರ್ಥಮಾಡಿಕೊಳ್ಳಲಾರದ ಅರಸಿಕನೆ ಅವನು?....ಮಾದೇವಿ ಮತ್ತೆ ಕಂಪಿಸಿದಳು, ಉನ್ಮಾದಗೊಂಡಳು, ಭಯದ ಸುಳಿವಿನಿಂದ ನೊಂದಳು; ಏನೋ ಆಗಿಹೋಯಿತು!—ಮನಸ್ಸಿನಲ್ಲಿ, ಬೀಳುನೀರಿನ ಗುಳ್ಳೆಗುಳ್ಳೆಗಳಂತೆ, ಉಕ್ಕಿ ಉಕ್ಕಿ ಮೂಡಿ ಮುಳುಗುವ ಅನೇಕಾನೇಕ ಚಿತ್ರವಿಚಿತ್ರ ಭಾವಗಳು....ಗೊಂದಲವನ್ನು ಒಳಗೊತ್ತಿ, ಉಗುಳುನುಂಗಿ ಕಂಪಿಸುವ ಧ್ವನಿಯಲ್ಲಿ ಹೇಳಿದಳು :

ಮಡಿವಳ ಮಾಚಯ್ಯ ನಮ್ಮ ಅರಮನೆಗೆ ಬಾರಯ್ಯ

—ಯಾವುದೋ ಮಾತು, ಯಾವುದೋ ಅರ್ಥ; ಹಾಗಾದರೂ ಅಷ್ಟು ಸ್ಪಷ್ಟ !........ಅರ್ಥವಾಯಿತು ಮಾಚಯ್ಯನಿಗೆ. ಎವೆ ಚಿವುಟಿ, 'ಆಗಲಿ ಬರುತ್ತೇನೆ, ತಾಯಿ' ಎಂದನು. ಇಂತಹ ಚೆಲುವೆ ಬಂದು ಕರೆಯುವಾಗ ಒಲ್ಲೆ ಎನ್ನುವನೆ ಈ ಚೆಲುಯುವ? ಭಾರವಾದ ಎದೆಯಿಂದ ಕಲಗುಟ್ಟ ಹಾರಾಡುವ ಭಾವಪತಂಗಗಳ ಅಸಹ್ಯ ಕೋಲಾಹಲದೊಡನೆ ಮಾದೇವಿ ಮನೆ ಸೇರಿದಳು.

ಅಂದೇ,

ಮಡಿವಳ ಬಂದನು ಮಡಿವಳಗೆ ಮಣೆಗಳ ಕೊಟ್ಟರು

ಮನೆಗೆ ಬಂದ ಮಡಿವಳನಿಗೆ ಕುಳ್ಳಿರ ಹೇಳಿ ಆಸರಿಗೆ ಕೇಳಿದರು.

ಮಣೆಗಳ ಕೊಟ್ಟರು ಮಡಿವಳಗೆ ಸಾಲೆನ ಹಾಕ್ಯಾರು

ಬಟ್ಟೆ ಹಾಕುವ ನೆವದಿಂದ ಬಾರಿಬಾರಿಗೂ ಮಾದೇವಿ ಮಾಚಯ್ಯನ ಎದುರು ಸುಳಿದಳು. ಮಾಚಯ್ಯ ಒಂದೊಂದು ಬಾರಿಯೂ ಆ ಅವಕಾಶವನ್ನು ಪೂರ್ಣವಾಗಿ ಯೋಗ್ಯವಾಗಿ ಬಳಸಿಕೊಂಡ. ಕೊನೆಗೂ ಬಟ್ಟೆಹಾಕಿ ಮುಗಿದುಹೋಯಿತು. ಆತ ಇನ್ನೂ ಅಲ್ಲಿಯೇ ಕೂಡುವಂತಿಲ್ಲ.

ಸಾಲೆನ ಹಾಕ್ಯಾರು ಮಾಚಯ್ಯ ಗಂಟ ಕಟ್ಯಾನು
ಗಂಟ ಕಟ್ಯಾನು ಮಾಚಯ್ಯ ಬೆನ್ನಿಗೆ ಬಿಗಿದನು
ಬೆನ್ನಿಗೆ ಬಿಗಿದನು ಮಾಚಯ್ಯ ಹೊಳೆಗೆ ನಡೆದನು

....ಆ ಕಿರುದೊರೆ ಅಲ್ಲಿ ತಿರುವಿ ಇಲ್ಲಿ ನೇರ ನಡೆದು ಒಮ್ಮೆ ಗುದುಕಿ ಮತ್ತೊಮ್ಮೆ ಮಗುಚಿ ಏರಿ–ಪಕ್ಕದ ಎರಡು ತಡಿಯ ಹೂಮರಗಳಿಗೆ ಕಥೆ ಹೇಳುತ್ತ ಸಾಗುತ್ತದೆ. ಸನಾತನವಾದ ಕರುಣಕಥೆಯನ್ನು ಕೇಳಿ ಕಂಬನಿ-ಮುತ್ತಿನಕಾಣಿಕೆ ಕೊಡುವಂತೆ ಆ ಮರಗಳು ಹೂವು ಉದುರಿಸುತ್ತವೆ. ಹೂ ಮುತ್ತುಗಳಿಂದ ಮತ್ತೆ ಮತ್ತೆ ಸಿಂಗಾರಗೊಂಡು ಸಾಗುತ್ತದೆ ಹೊಳೆ....

ಅಲ್ಲಿ,

ಸಾಲೆನೊಗೆದನು ಮಾಚಯ್ಯ ಬಿಸಿಲಿಗೆ ಹಾಕ್ಯಾನು
ಬಿಸಿಲಿಗೆ ಹಾಕ್ಯಾನು ಮಾಚಯ್ಯ ನೆಳಲಿಗೆ ಕುಂತನು

ಬಟ್ಟೆಗಳನ್ನೆಲ್ಲ ಒಗೆದು ಬಿಸಿಲಿನಲ್ಲಿ ಒಣಹಾಕಿ ಮಾಚಯ್ಯ ಹೊಳೆಯ ದಡದ ಒಂದು ಮರದ ನೆರಳಿನಾಸರೆಯಲ್ಲಿ ಕುಳಿತುಕೊಂಡ.

ದಣಿದ ದೇಹಕ್ಕೆ ತಂಪಾದ ಗಾಳಿ ಬೀಸಿ ಆಯಾಸವನ್ನಿಷ್ಟು ಪರಿಹಾರ ಮಾಡಿತು....ಎಲ್ಲಿಯ ಆಯಾಸ? ಆಯಾಸವೆನಿಸಲು ಒಗೆದ ಸಾಲೆ ಯಾರದು? ಒಮ್ಮೆ ಆಯಾಸ ತೋರಿದರೂ ಅದು ಒಗೆಯುವಾಗ, ಅಷ್ಟೆ. ಈಗ, ಕೇವಲ ಆ ದಣಿವಿನ ಸ್ಮೃತಿ. ಕರ್ಮ ಮಾಡುವಾಗ ದಣಿವು; ಅನಂತರದ ಅದರ ಸ್ಮೃತಿ ಮಧುರ....ಇದಂತೂ ಮಧುರಕರ್ಮದ ಮಧುರತರ ಸ್ಮೃತಿ!....ಹಸಿರಿನ ಮೇಲೆ ನೆಳಲಿನಲ್ಲಿ ಕುಳಿತು ಮರಕ್ಕೊರಗಿ ಈ ಗಾಳಿಯ ಸುಖಕ್ಕೆ ಮೆಯ್ಯೊಡ್ಡಿದಾಗ, ಎದುರಿನಲ್ಲಿ ಒಣಗುತ್ತಿರುವ ಸೀರೆಗಳು ಗಾಳಿಯಲ್ಲಿ ಹಾರಾಡುತ್ತ ಈತನ ಮನಸ್ಸಿನಲ್ಲಿ ಮಾದೇವಿಯ ನೆನಪನ್ನು ಕೆರಳಿಸಿತು. ಅವಳ ಚೆಲುವು ಮೇಲೆಮೇಲೆ ಮರುಕೊಳಿಸಿ ಕುಣಿದಾಡುತ್ತಿರುವಂತೆ ತೋರಿತು. ಈತನ ಹರೆಯದ ಬಿಸಿ ರಕ್ತ ಇನ್ನೂ ಬಿಸಿಯೇರಿ ನಾಡಿನಾಡಿಗಳಲ್ಲೂ ಗೆಜ್ಜೆಕಟ್ಟಿ ತಾಳಹಾಕಿದಂತೆ ಸ್ಪಂದಿಸಿ ಮನವನ್ನು ಹುಚ್ಚೆಬ್ಬಿಸಿ ಹಾರಿಸಿತು. ಆಕೆಯ ನಡೆನುಡಿಗಳ, ಮಿಗಿಲಾಗಿ ಆ ಬಟ್ಟಲುಗಂಗಳ ಉರಿಹಂಬಲದ ಆಹ್ವಾನ! ಇತರರಿಗರಿವಾಗದಂತೆ ಕದ್ದು ಬಂದು ತನ್ನನ್ನು ಕೈಬೀಸಿ ಕರೆದ ಆ ಕಣ್ಣುಗಳು....ಮತ್ತೆ, ಸೀರೆ ಗಾಳಿ ಯಾಟಕ್ಕೆ ತಟಪಟನೆ ಹಾರಾಡಿ ಎದ್ದು ಬೀಳುತ್ತದೆ. ಮಾಚಯ್ಯ ಆ ಸೀರೆ ಯನ್ನು ನೋಡಿದ. ಮಾದೇವಿಯ ಸೀರೆಯದು. ಆಕೆಯ ಚೆಲುವಿಗೆ ತಕ್ಕುದಾದ ಸೀರೆ! ಮೀಸೆ ಕುಣಿದು ತುಟಿಯರಳುತ್ತದೆ. ಚಮತ್ಕಾರದ ಭಾವನೆಯೊಂದು ಮಿಂಚುತ್ತದೆ:

ಸೀರೆಯಿಂತಾದು ಸೀರೆನುಡುವಳೆಂಥವಳು
ಸೀರೆಗಿನ್ನೂರು ಸೀರೆನುಡುವಳಿಗೆ ಮುನ್ನೂರು

—ಪಾಪ! ಮುನ್ನೂರರ ಸಂಖ್ಯೆಯನ್ನು ಮೀರಿ ಹೋಗಲಿಲ್ಲ ಅವನ ಬುದ್ಧಿ!....ಅಷ್ಟರಲ್ಲೆ, ಬೀಸಿ ಬಂದ ಗಾಳಿಯೊಡನೆ ಸುರುಳಿ ಸುರುಳಿಯಾಗಿ ಸುತ್ತಿಕೊಂಡು ಆಕೆಯ ಚೆಲುವಾದ ಕುಪ್ಪುಸ ಉರುಳುತ್ತ ಓಡುತ್ತದೆ

ಕುಬುಸವಿಂತಾದು ಕುಬುಸ ತೊಡುವಳೆಂಥವಳು
ಕುಬುಸಕಿನ್ನೂರು ಕುಬುಸ ತೊಡುವಳಿಗೆ ಮುನ್ನೂರು

—ಸೀರೆಗೂ ಇನ್ನೂರು, ಕುಬುಸಕ್ಕೂ ಇನ್ನೂರು! ಆಕೆಯ ಮೆಯ್ ತಗುಲಿದ ಯಾವ ಚಿಂದಿಗಾದರೂ ಅಷ್ಟೇ ಬೆಲೆ!....ಇದೇ ತೆರನಾದ

ಅನೇಕಾನೇಕ ಸುಖಸ್ವಪ್ನಗಳ, ಹಗಲುಗನಸುಗಳ ಚಿತ್ರಲೋಕದಲ್ಲಿ ತೇಲಾಡುತ್ತ ಕಣ್ಣು ಮುಚ್ಚುತ್ತಾನೆ. ಎಚ್ಚರವಾದಾಗ ಬಹಳ ಹೊತ್ತಾಗಿರಬೇಕು. ಆಗತಾನೆ ಸಿಹಿಯುಂಡ ಬಾಯಿಯನ್ನು ಚಪ್ಪರಿಸಿ ಸವಿಯುವಂತೆ, ಆ ಬಣ್ಣಬಣ್ಣದ ಕನಸುಗಳ ಹೊಸನೆನಪುಗಳನ್ನು ಚಪ್ಪರಿಸುತ್ತ ಒಣಗಿದ ಬಟ್ಟೆಗಳನ್ನು ಮಡಿಸಿ ಗಂಟುಕಟ್ಟಿಕೊಂಡು ಬೆನ್ನಿಗೇರಿಸಿ ಮನೆಯತ್ತ ನಡೆಯುತ್ತಾನೆ.

—ಸಂಜೆಯಾಗಲು ಇನ್ನೂ ತಾಸು ಹೊತ್ತಿದೆ. ಆಗ ಮಾದೇವಿ ಮಾಚಯ್ಯನಿಂದ ಬಟ್ಟೆಗಳನ್ನು ತೆಗೆದುಕೊಂಡುಹೋಗಲು ಬರುತ್ತಾಳೆ. ಮನೆಯಲ್ಲಿ ಅತ್ತೆಯಾಗಲಿ ಮಾವನಾಗಲಿ ಗಂಡನಾಗಲಿ ಈಕೆಗೆ ಹೋಗು ಎಂದಿರಲಾರರು. ಈಕೆ, ಬಟ್ಟೆಯನ್ನು ತರುವ ಸಲುವಾಗಿ ಮಾಚಯ್ಯನಲ್ಲಿಗೆ ಹೋಗುತ್ತೇನೆ ಎಂದು ಯಾರೊಡನೆಯೂ ತಿಳಿಸಿ ಬಂದಿರಲಿಕ್ಕಿಲ್ಲ. ಮೊದಲೇ ಅಳುಕುವ ಮನಸ್ಸು. ರಕ್ತದ ಕರೆ ಮನೆಯ ಸಮಾಜದ ಭೀತಿಯನ್ನು ಮೀರಿಸಿ ನಿಂತಿದ್ದರೂ, ಮೇಲೆ ಮೇಲೆ ಸಣ್ಣ ಸಣ್ಣ ಘಟನೆಗಳಿಂದೆಲ್ಲ ಭೀತಿ ಭೂತಾಕಾರವಾಗಿ ಮೂಡಿಬಂದು ಮನಸ್ಸನ್ನು ಗಡಗಡನೆ ನಡುಗಿಸಿಬಿಡುತ್ತದೆ....ಮನೆಯಲ್ಲಿ, ಹೋಗಲೇ ಬೇಡವೆ ಎಂದು ಸಾವಿರ ಬಾರಿ ಯೋಚನೆಮಾಡಿ, ಬಗೆಹರಿಯದೆ ಮನಸ್ಸು ಗೊಂದಲದಲ್ಲಿ ಸಿಕ್ಕು ನರಳುತ್ತಿರುವಾಗಲೇ, ಕಾಲು ಬುದ್ಧಿಯ ನಿರ್ದೇಶನದತ್ತ ಕಾಯದೆ ಹೊರಟುಬಿಟ್ಟಿತು. ಮಾದೇವಿ, ತನಗೆ ತಿಳಿಯದೆಯೇ, ಮಾಚಯ್ಯನ ಮನೆಯತ್ತ ನಡೆದುಬಿಟ್ಟಿದ್ದಳು........ಎದೆ ಬಡಬಡನೆ ಹೊಯ್ದುಕೊಳ್ಳುವಂತೆಯೇ ಮಾಚಯ್ಯನ ಮನೆಯೆದುರು ಬಂದುನಿಂತು, ಅತ್ತಿತ್ತ ಯಾರಾದರೂ ಹೊಂಚುತ್ತಿದ್ದಾರೊ ಎಂದು ಕಳ್ಳನೋಟ ಹಾಯಿಸಿ ಮಾಚಯ್ಯನನ್ನು ಕರೆಯುತ್ತಾಳೆ. ಮಾಚಯ್ಯ ಚಂಗನೆ ಹಾರಿ ಹೊರಬರುತ್ತಾನೆ. ಮಾದೇವಿ ತನ್ನ ಮನೆಬಾಗಿಲಿಗೆ ಬಂದಿದ್ದಾಳೆ. ತನ್ನ ಬಯಕೆಯ ಔತಣವಾಗಿ ಹೊಸಲಿನಲ್ಲಿ ನಿಂತಿದ್ದಾಳೆ........ಇಬ್ಬರ ನಡುವೆ ದೃಷ್ಟಿಯ ಕುಸುಮಯುದ್ಧ ನಡೆದು ಮಾಚಯ್ಯನ ಮುಖದಲ್ಲಿ ನಗೆಯುಕ್ಕುತ್ತದೆ. ಮಾದೇವಿಯ ಮುಖದಲ್ಲಿ ಭೀತಿಯ ನಡುವೆ ಮುಗುಳು ನಗೆಯೊಂದು ಹಾದುಹೋಗಿ ಫಕ್ಕನೆ ಲಜ್ಜೆ ಮೂಡಿ ಮುಖ ಕೆಳಬಾಗುತ್ತದೆ, ಆತನ ಕಣ್ಣು ತನ್ನ

ಚೆಲುವೆಲ್ಲವನ್ನೂ ಕಡೆದಿರಲು ಒಮ್ಮೆ ನೊರೆಯುಕ್ಕಿ ಮತ್ತೆ ಒಳಗೆರಗಿ ದಂತೆ!........ನಡುಗುತ್ತಿರುವ ಧ್ವನಿಯಲ್ಲಿ ಹೇಳುತ್ತಾಳೆ:

ಮಡಿವಳ ಮಾಚಯ್ಯ ನಮ್ಮ ಸೀರೆ ಕೊಡಯ್ಯ

ಆತ ಈ ಪ್ರಶ್ನೆಗೆ ಉತ್ತರ ಸಿದ್ಧಮಾಡಿಕೊಂಡೇ ಇದ್ದಾನೆ. ಹುಬ್ಬಿನ ಕುಡಿಹಾರಿಸಿ,

ಸೀರೆಕೊಡುತೇನೆ ಒಳಲಿಕೆ ಬಾರವ್ವ

ಎನ್ನುತ್ತಾನೆ....ಇದಕ್ಕೆ ಏನು ಹೇಳುವುದು? ಮನೆಯೊಳಕ್ಕೆ ಹೋದರೆ?.... ಅರ್ಥವಾಯಿತು! ತಾನು ಅದನ್ನೆ ಬಯಸಿ ಬಂದಿಲ್ಲವೆ? ಹಾಗೆಂದು ಒಮ್ಮೆಗೇ ಮನೆಯೊಳಕ್ಕೆ ಹೊಕ್ಕುಬಿಡುವುದೆ? 'ಇಲ್ಲ' ಎಂದು ಖಡಾ ಖಂಡಿತವಾಗಿ ಹೇಳುವುದೂ ಸಾಧ್ಯವಿಲ್ಲ....ಕಾಲಿನ ಉಗುರಿನಿಂದ ನೆಲ ಕೆರೆಯುತ್ತ ಕ್ಷೀಣವಾದ ಧ್ವನಿಯಲ್ಲಿ ಹೇಳುತ್ತಾಳೆ:

ಒಳಲಿಕೆ ಬಂದರೆ ನಮ್ಮ ಅತ್ತೆ ಬೈದಾಳು

—ಮತ್ತೆ ಆಚೆಯೀಚೆ ಕಣ್ಣು ಹಾಯಿಸುತ್ತಾಳೆ, ಯಾರಾದರೂ ನೋಡುತ್ತಿರುವರೊ ಎಂಬ ಸಂಶಯದಿಂದ....ಆತ ನಿರುತ್ತರನಾಗಿ ನಸು ನಗುತ್ತಲೇ ನಿಂತಿದ್ದಾನೆ. ಮಾತನ್ನು ಹೇಗಾದರೂ ಮುಂದುವರಿಸಬೇಕಲ್ಲ. ಪುನಃ ಕೇಳುತ್ತಾಳೆ:

ಮಡಿವಳ ಮಾಚಯ್ಯ ನಮ್ಮ ಪಟ್ಟೆ ಕೊಡಯ್ಯ

ಆತನ ಉತ್ತರ ಇದ್ದೇ ಇದೆ:

ಪಟ್ಟೆ ಕೊಡತೇನೆ ಒಳಲಿಕೆ ಬಾರವ್ವ

....ಉರಿಯಂತೆ ಉಜ್ವಲವಾದ ಕಣ್ಣು, ಮುಖ; ಉರಿನಾಲಗೆಯ ತುದಿಯಂತೆ ಕುಣಿಯುವ ಕೆಮ್ಮಾಸೆಯ ಕುಡಿಗಳು! ಏಕಾಪೋಶನವಾಗಿ ತನ್ನನ್ನು ಸಂಪೂರ್ಣ ಕೊಂಡು ಕರಗಿಸಿಬಿಡುವ ಬೆಂಕಿಯಂತಹ ಕರೆ!— ಕಾಲು ಹೊಸಿಲೊಳಕ್ಕೆ ಹಾರಲು ಸಿದ್ಧವಾಯಿತು. ಇನ್ನೇನು ಕಾಲೆತ್ತಿ ಒಳಗಿಡಬೇಕು. ಅಷ್ಟರಲ್ಲಿ ಮತ್ತೆ ಬುದ್ಧಿ ಭೀತಿಗಳು ಕಾಲಿಗೆ ತಡೆ ಹಾಕುತ್ತವೆ. ಸಂಭಾಷಣೆಯನ್ನು ಮುಂದುವರಿಸಿ, ಬಿಗಿಯಾದ ಸನ್ನಿವೇಶ ವನ್ನು ದೀರ್ಘಗೊಳಿಸಿ ಸಡಲಿಸಲು ಪ್ರಯತ್ನಿಸುತ್ತಾಳೆ, ಮಾದೇವಿ.

ಮಡಿವಳ ಮಾಚಯ್ಯ ನಮ್ಮ ಹಚ್ಚಡ ಕೊಡಯ್ಯ

ಆತ ತನ್ನ ಪಲ್ಲವಿಯನ್ನು ಬಿಡುವುದೇ ಇಲ್ಲ:

ಪಚ್ಚಡ ಕೊಡುತೇನೆ ಒಳಲಿಕೆ ಬಾರವ್ವ

—'ಒಳಗೆ ಬಾ, ಒಳಗೆ ಬಾ!' ಮತ್ತೆ ಮತ್ತೆ ಆಹ್ವಾನ. ಏಕಾಂತ ಅಸಹ್ಯವಾಗಿ ಬೆಳುದಿಂಗಳ ನೀರವರಾತ್ರಿಯಲ್ಲಿ ಏಕಪ್ರಕಾರ ಕೂಗೇ ಕೂಗುವ ತಿಂಗಳ ಹಕ್ಕಿಯಂತೆ!—ಒಂದೇ ಮಾತು, ಒಂದೇ ರಾಗ, ಒಂದೇ ಬೆಂಕಿ!....ತಡೆಯಲಾರದೆ ಮಾದೇವಿ ಫಕ್ಕನೆ ಮುಖವೆತ್ತಿ ನೋಡುತ್ತಾಳೆ. ಉರಿಯಂತೆ ಉಜ್ವಲವಾದ ಕಣ್ಣು, ಮುಖ; ಉರಿನಾಲಗೆಯ ತುದಿಯಂತೆ ಕುಣಿಯುವ ಕೆವ್ವಿನ್ಮಾಸೆಯ ಕುಡಿಗಳು; ಏಕಾಪೋಶನವಾಗಿ ಕೊಂಡು ತನ್ನ ಸರ್ವಸ್ವವನ್ನೂ ಕರಗಿಸಿಬಿಡುವ ಬೆಂಕಿಯಂತಹ ಕರೆ!....ಆಕೆಯ ಕಣ್ಣು ಕಾತುರದಿಂದ ಕುಣಿಯುತ್ತವೆ. ದೇಹ ತರತರನೆ ಕಂಪಿಸುತ್ತದೆ. ತೋಳು ತಾವಾಗಿಯೇ ತೆರೆದುಕೊಳ್ಳಲು ಹವಣಿಸುತ್ತವೆ. ಕಾಲು ಮೇಲೆದ್ದು ಒಳ ನುಗ್ಗಲು ಸಿದ್ಧವಾಗುತ್ತದೆ....ಅಯ್ಯೋ! ತನ್ನ ಸರ್ವಸ್ವವನ್ನೂ ತನ್ನ ಕಿರಣ ಪಾಶಗಳಿಂದ ಕಟ್ಟಿ ಸೆಳೆಯುತ್ತಿರುವ ಈ ನೋಟವನ್ನು ಹೇಗೆ ಸೋಲಿಸಿ ತಿರುಗಿಸುವುದು?........ಮನಸ್ಸಿನಲ್ಲಿ ಕೋಲಾಹಲ. ಎತ್ತಿತ್ತಲೂ ಸಾವಿರ ವಿಚಿತ್ರಗಳ ಶಬ್ದಗಳು. ಸಂತೆಯ ನಡುವೆ ನಿಂತ ಹಳ್ಳಿಯವನಂತೆ, ಏನು ಮಾಡಲೂ ತೋಚದೆ ಈ ಶಬ್ದಸಹಸ್ರಗಳ ಚಿತ್ರಸಮ್ಮೇಲನದಿಂದ ಚಿತ್ತ ತತ್ತರಿಸುತ್ತದೆ.......ಅಯ್ಯೋ, ಹೇಗೆ ಸಹಿಸುವುದಿದನ್ನು? ಹೇಗಾದರೂ ತಪ್ಪಿಸಿಕೊಳ್ಳಬೇಕು. ಇವುಗಳ ಕಾಟದಿಂದ ಪಾರಾಗಿ ಪಲಾಯನ ಮಾಡಬೇಕು! ಕಾಲುಗಳು ಛಂಗನೆ ಪುಟಿದವು. ಮರುಕ್ಷಣದಲ್ಲಿ ಮಾದೇವಿ ಮಾಚಯ್ಯನ ಮನೆಯೊಳಗೆ ಸೇರಿದ್ದಳು.

ಒಳಲಿಕೆ ಹೋದಳು ಒಳ್ಳೆ ಕದವ ಹಾಕಿದರು

ಕದ ಮುಚ್ಚಿತು!....ಸಂಜೆಯಾಯಿತು!

ಇಲ್ಲಿ, ಮನೆಯಲ್ಲಿ....ಸಂಜೆಯಾಯಿತು. ಮಾದೇವಿ ಬರಲಿಲ್ಲವೆಂದು ಎಲ್ಲರಿಗೂ ಕಳವಳ. ಹೀಗೆ ಸಂಜೆಯಾದ ಮೇಲೆ ಮನೆಸೇರದೆ ಎಲ್ಲಿ ಹೋಗಿರಬಹುದು? ಅತ್ತೆ ಮನಸ್ಸಿನಲ್ಲೆ ಅಂದುಕೊಳ್ಳುತ್ತಾಳೆ:

ದನ ಬಂದವು ನಮ್ಮ ಮಾದೇವಿ ಬರಲಿಲ್ಲ

ದನಕರುಗಳು ಬಂದುವು. ಅವುಗಳನ್ನು ಕಟ್ಟಿ ಹುಲ್ಲು ಹಾಕಿದು

ದಾಯಿತು. ಸಂಜೆ ಕಳೆದು ಕತ್ತಲೆ ಕಾಲಿಟ್ಟಿತು,

ಎಮ್ಮೆ ಕರೆದೆದ್ದೆ ನಮ್ಮ ಮಾದೇವಿ ಬರಲಿಲ್ಲ

ಸಂಜೆಯ ಮನೆಗೆಲಸವೆಲ್ಲ ಮುಗಿದವು.

ಹಾಲುಕಾಸಿದೆ ನಮ್ಮ ಮಾದೇವಿ ಬರಲಿಲ್ಲ

ಹಾಲುಕಾಯಿಸಿ ಮಾಡಿದ್ದ ಅಡುಗೆಯನ್ನು ಎಲ್ಲರಿಗೂ ಬಡಿಸಿಯಾಯಿತು. ಸಂಜೆಯಾಗಿ ತಾಸು ಕಳೆಯಿತು. ಮಾದೇವಿ ಬರಲೇ ಇಲ್ಲ....ಇಷ್ಟು ಹೊತ್ತಾದರೂ ಬರಲಿಲ್ಲವೇಕೆ; ಏನಾದರೂ ಆಗಬಾರದುದು ....ಒಮ್ಮೆ ಭೀತಿ ಸುಳಿಯಿತು, ಮನೆಯವರಿಗೆ. ಆದರೆ ಅಷ್ಟರಲ್ಲಿ, ಮಾದೇವಿ ಬರದಿದ್ದರೂ ಆಕೆಯ ಸುದ್ದಿ, ಮನೆಯಿಂದ ಮನೆಗೆ ಹಾರಾಡುತ್ತ ರೆಕ್ಕೆ ಪುಕ್ಕ ಬಲಿತು ಬಂದಿತು....ಒಮ್ಮೆ ಹೀಗಿರಬಹುದೆ ಎಂದು ಶಂಕಿಸಿದರು; ಮತ್ತೊಮ್ಮೆ ನೆನೆದು ನಡುಗಿದರು; ಇನ್ನೊಮ್ಮೆ ಮನೆಗೆ ಮಸಿ ಹಚ್ಚಿದಳು ಎಂದು ಕನಲಿದರು; ಅವಳನ್ನು ಬೈದರು, ಆ ನೀಚನನ್ನು ಬೈದರು; ಊರವರನ್ನೆಲ್ಲ ಬೈದರು; ಕೊನೆಗೆ ತಮ್ಮನ್ನೆ ತಾವು ಬೈದುಕೊಂಡರು....ಎಲ್ಲರ ಒಳಗೂ ಕೋಪ ಕುದಿಯತೊಡಗಿತು. ಗಂಡ ಮುಖ ಉರಿಯುತ್ತಿರಲು ಮಾತನ್ನೆ ಆಡದೆ ಕೂಳು ತಿಂದು ಹೋದನು. ಆ ನೀಚಳ ಬಗ್ಗೆ ಮತ್ತೆ ಚಿಂತಿಸಬಾರದೆಂದು, ಬಂದೊಡನೆ ಪ್ರಾಯಶ್ಚಿತ್ತ ಮಾಡುವುದೊಂದೆ ಬಾಕಿಯೆಂದುಕೊಂಡು ಮಲಗಲು ನಡೆದರು, ಗಂಡ ಮತ್ತು ಮಾವ. ಅತ್ತೆಯಾದರೂ ಎಷ್ಟು ಹೊತ್ತು ಕಾದಾಳು? ಕಸಮುಸುರೆ ಮುಗಿಸಿ ತಾನೂ ಮಲಗಲೆಂದು ಹೊರಟಳು.

ಚಾಪೆ ಬಿಚ್ಚಿದೆ ಇನ್ನೂ ಮಾದೇವಿ ಬರಲಿಲ್ಲ

—ಮೊದಲು 'ನಮ್ಮ ಮಾದೇವಿ' ಬರಲಿಲ್ಲ ಎಂದು ಕಾತರಿಸಿದವಳು, ಈಗ, ಇನ್ನೂ ಈ ನೀಚೆ ಬರಲಿಲ್ಲವೆನ್ನುವಂತೆ ಹಲ್ಲು ಕಡಿದು ಗೊಣಗಿಕೊಂಡಳು. ಬಾಗಿಲಬಳಿ ಹೋಗಿ ಹೊರಗೊಮ್ಮೆ ಇಣುಕಿನೋಡಿದಳು. ಎಲ್ಲೂ ಸುಳಿವು ಕಾಣಲಿಲ್ಲ. ಇನ್ನೇನು ನೋಡುವುದು?

ಬಾಗಲ್ಹಾಕಿದೆ ಇನ್ನೂ ಮಾದೇವಿ ಬರಲಿಲ್ಲ

ಎಂದು ಮತ್ತೊಮ್ಮೆ ಬಾಗಿಲಿಕ್ಕಿ ಹಲ್ಲುಕಡಿದಳು. 'ಇನ್ನೂ ಬರಲಿಲ್ಲ' ಎಂದು ಬಾಯಲ್ಲಿ ಗೊಣಗಿದರೂ, ಮತ್ತೆ ಬಾರದೆ ಎಲ್ಲಾದರೂ ಸತ್ತರೆ

ಲೇಸು ಎಂದುಕೊಂಡಳು. ಮನಸ್ಸಿನಲ್ಲಿ ಕೋಪ ಉರಿಯುತ್ತಿರಲು ಹಾಸಿಗೆಯ ಮೇಲೆ ಬಿದ್ದಳು. ಮಾವ ಆಗಲೇ ಮಲಗಿಬಿಟ್ಟಿದ್ದ. ಗಂಡ ಮುಸುಕಿನೊಳಗೇ ಉರಿಯುತ್ತ ಹಾಸಿಗೆಯಲ್ಲುರುಳುತ್ತಿದ್ದ....ದೀಪಗಳೆಲ್ಲ ಆರಿದವು. ಕತ್ತಲೊಳಗೆ ಮನೆ ಕಣ್ಣುಮುಚ್ಚಿತು.

....ರಾತ್ರಿ ಹೊತ್ತೇರುತ್ತ ನಡೆದಿದೆ. ಹಾಲು ಚೆಲ್ಲಿದ ಬೆಳುದಿಂಗಳಿನ ಹೂಬೆಳಕಿನಲ್ಲಿ, ಮಾದೇವಿ ಮಾಚಯ್ಯನ ಮನೆಯಿಂದ ಹೊರಬಿದ್ದು ಸದ್ದಾಗದಂತೆ ಕಳ್ಳ ಹೆಜ್ಜೆಯಿಕ್ಕುತ್ತ ಮನೆಯಕಡೆ ಬರುತ್ತಾಳೆ. ಕಲುಷಿತ ವಾದ ತನ್ನ ದೇಹವನ್ನು ಬೆಳುದಿಂಗಳಿನ ಹಾಲು ಬೆಳಕಿಗೆ ಒಡ್ಡಲು ಹೆದರುತ್ತ ಎದೆಯನ್ನು ಇನ್ನಿಷ್ಟು ಕತ್ತಲೆ ಮಾಡಿಕೊಂಡು, ತೂರಿಬರುವ ನೂರಾರು ಕಾಳಭಾವನೆಗಳನ್ನು ಅದರಲ್ಲಡಗಿಸಿಕೊಂಡು ನಡೆದು ಬರುತ್ತಾಳೆ....ಸಾಗುತ್ತಿದ್ದ ಹೆಜ್ಜೆ ನಿಂತಿತು. ಅಂತೂ ಮನೆ ಬಂದಿತು! ಮನೆಯ ಬಾಗಿಲಲ್ಲಿ ನಿಂತಳು. ತನ್ನ ಮನೆ! ಯಾವ ಮನೆ ತನ್ನ ಬಾಳಿನ ನಂದಾದೀಪದ ವಾಸ್ತುಮಂದಿರವಾಗಬೇಕಿತ್ತೋ, ಯಾವ ಮನೆ ಬೆಳಗಲೆಂದು ತವರು ತನ್ನನ್ನಿಲ್ಲಿಗೆ ಕಣ್ಣೊರೆಸಿಕೊಂಡು ಕಳಿಸಿಕೊಟ್ಟಿತೊ, ಯಾವ ಮನೆ ತನ್ನನ್ನು ಸೂರ್ಯಚಂದ್ರಮರಂತೆ ಹಗಲಿರುಳೂ ಬೆಳಗಲೆಂದು ತೆರೆದ ತೋಳಿನಿಂದ ಸ್ವಾಗತಿಸಿ ಒಳಗೆ ಕರೆದುಕೊಂಡಿತೊ ಆ ಮನೆಗೆ ಅನ್ಯಾಯಮಾಡಿದೆನೆಂಬ ಒಳಗಿನೊಳಗಿನ ಕೂಗು ದೇಹವನ್ನೆಲ್ಲ ಗಡಗುಟ್ಟಿಸಿ ವಿಕಟ ಹಾಸಗೈದಂತಾಗುತ್ತದೆ. ಕಳ್ಳದನಿಯಲ್ಲಿ 'ಬಾಗಿಲು ತೆರೆಯಿರಿ' ಎಂದು ಕರೆಯಲು ಸಿದ್ಧಳಾದವಳು, ಒಮ್ಮೆಗೇ 'ಅಯ್ಯೋ' ಎಂದು ಕಿರಚಿಬಿಡಲು ಯತ್ನಿಸುತ್ತಾಳೆ. ಅಷ್ಟರಲ್ಲಿ ಮತ್ತೆ, ಕಳ್ಳನಂತೆ ಕತ್ತಲಲ್ಲಿ ಅವಿತುಕೊಂಡ ಬುದ್ಧಿಯೇ ಮಾರ್ಗದರ್ಶನ ಮಾಡುತ್ತದೆ. ತುಟಿ ಸವರಿಕೊಂಡು, ಕಟ್ಟಿದ ಗಂಟಲನ್ನು ಕೆಮ್ಮಿ ಸರಿಪಡಿಸಿಕೊಂಡು,

ಅತ್ಯಮ್ಮತ್ಯಮ್ಮ ಕದಗಳ ತೆರೆಬನ್ನಿ

ಎನ್ನುತ್ತಾಳೆ....ನಿದ್ದೆ ಬಾರದೆ ಹಾಸಿಗೆಯಲ್ಲೆ ಹಲ್ಲುಕಡಿಯುತ್ತಿರುವ ಅತ್ತೆಯ ಕೋಪ ಹೇಳುವುದಲ್ಲ. ಯಾವನೊಡನೆಯೋ ಹೋಗಿ ಕೂಡಿ ಸರಿರಾತ್ರಿಯಲ್ಲಿ ಹೀಗೆ ಮನೆಗೆ ಬರುವಾಕೆ ತಮ್ಮ ಮನೆತನದ ಹೆಸರನ್ನು ಊರಿನ ನಾಲ್ಕು ಜನರ ನಾಲಗೆಯಲ್ಲಿ ಕುಲಗೆಡಿಸಿ ಕುಣಿಸಿಬಿಟ್ಟಾಳು....ಮಲಗಿದಲ್ಲಿಂದಲೇ.

ಕದಗಳತೆರೆಯೋಕೆ ಇಷ್ಟೊತ್ತೆಲ್ಲಿಗ್ಹೋಗಿದ್ದೆ

ಎಂದು ಗದರುತ್ತಾಳೆ. ಅವಳ ಗಡಸುಸ್ವರಕ್ಕೆ ಮತ್ತೆ ಮೈಯ್ ಕಂಪಿಸುತ್ತದೆ. ಕಾಲ ಕೆಳಗಿನ ನೆಲವೇ ಗಡಗಡನೆ ಅಲ್ಲಾಡಿದಂತೆನಿಸುತ್ತದೆ. ಈಗಲೂ, ಭೀತಿಯ ಕತ್ತಲೆಯೊಳಗಿಂದಲೇ ಹುಟ್ಟಿದ ಬುದ್ಧಿಯ ವೊಂದು ಧೈರ್ಯ ಚಾತುರ್ಯವನ್ನು ಒದಗಿಸುತ್ತದೆ.

ತಾಯವ್ವ ಬಂದಿದ್ಲು ಬುತ್ತಿ ರೊಟ್ಟಿ ತಂದಿದ್ಲು
ಬುತ್ತಿರೊಟ್ಟಿ ತಂದಿದ್ಲು ಅಲ್ಲೆ ಉಣ್ಣುತ್ಹಾಕ್ಯಂಡೆ

ಎಂದು ಉತ್ತರಿಸುತ್ತಾಳೆ. ಈ ಠಕ್ಕು ಸಬೂಬು ಹೇಳುವ ಕಳ್ಳದನಿ ಅತ್ತೆಯನ್ನು ಮೋಸಗೊಳಿಸಲಿಲ್ಲ. ಮತ್ತೊಮ್ಮೆ ಆಕೆ ಹಿಂದಿನಂತೆಯೇ ಗದರಿದಳು :

ಉಣ್ಣೋದೆಷ್ಟೊತ್ತೆ ಮತ್ತೆ ಬರುವುದೆಷ್ಟೊತ್ತೆ

....ಅತ್ತೆ ಕದ ತೆರೆಯಲೇ ಇಲ್ಲ. ಏನು ಮಾಡುವುದು ?....ಮತ್ತೆ ಮಾವನ ಮಂಚದ ಬದಿಯ ಕಿಟಕಿಯತ್ತ ಹೋಗಿ ಮೆಲ್ಲಗೆ,

ಮಾಪಯ್ಯ ಮಾವಯ್ಯ ಕದಗಳ ತೆರೆಬನ್ನಿ

ಎನ್ನುತ್ತಾಳೆ. ಆತನೂ ಸಿಟ್ಟಿನಿಂದ ಉರಿದು ಕೇಳುತ್ತಾನೆ :

ಕದಗಳ ತೆರೆಯೋಕೆ ಇಷ್ಟೊತ್ತೆಲ್ಲಿಗ್ಹೋಗಿದ್ದೆ

ಈ ಬಾರಿ ಉತ್ತರಿಸಲು ತಡವಾಗಲಿಲ್ಲ.

ತಾಯವ್ವ ಬಂದಿದ್ಲು ಪಟ್ಟೆ ಸೀರೆ ತಂದಿದ್ಲು
ಪಟ್ಟೆಸೀರೆ ತಂದಿದ್ಲು ಅಲ್ಲೆ ಉಡುತ್ಹಾಕ್ಯಂಡೆ

ಈ ಮಾತು ಅವನ ಉರಿಯನ್ನು ಮತ್ತಷ್ಟು ಕೆರಳಿಸಿತು. ಮಲಗಿದಲ್ಲಿಂದಲೇ ಅರಚಿದ :

ಉಡುವುದೆಷ್ಟೊತ್ತೆ ಮತ್ತೆ ಬರುವುದೆಷ್ಟೊತ್ತೆ

—ಮಾವನೂ ಕದ ತೆರೆಯದೆ ಬುಸುಗುಟ್ಟುತ್ತ ಉರುಳಿದರು.... ಇನ್ನು ಪತಿಯ ಮೊರೆ ಹೊಗಬೇಕು. ಯಾವನು ತನ್ನ ಸರ್ವಸ್ವವನ್ನೂ ಬಯಸುವುದು ಸಹಜವೋ, ಯಾವನಿಗೆ ತಾನು ತನ್ನ ಸರ್ವಸ್ವವನ್ನೂ ಅರ್ಪಿಸುವುದು ಕರ್ತವ್ಯವಾಗಿದ್ದಿತೋ ಆತನಿಗೆ ಮೋಸಮಾಡಿ ಮತ್ತೆ ಈಗ ಆತನನ್ನೆ ಮೊರೆಹೋಗುವ ಗತಿ ಬಂದಿತೆ? ಇನ್ನೇನು ಮಾಡುವುದು? ....ಆತ ಮಲಗುವ ಬಳಿಯ ಕಿಟಕಿಯತ್ತ ನಡೆದಳು.

ರಾಯರೆ ರಾಯರೆ ನಮ್ಮ ಕದಗಳ ತೆರೆಬನ್ನಿ

ಪ್ರೇಮಲ ಮಾಧುರ್ಯವನ್ನು ಮಾತಿನ ತುಂಬ ಸಿಂಪಡಿಸಿ ಹೇಳಿ, ತನ್ನ ಅದೃಷ್ಟವನ್ನು ಕಾಯುತ್ತ ನಿಂತಳು. ಆದರೆ....

ಕದಗಳ ತೆರೆಯೋಕೆ ಇಷ್ಟೊತ್ತೆಲ್ಲಿಗ್ಹೋಗಿದ್ದೆ

—ಅಯ್ಯೋ! ಪತಿಯಿಂದಲೂ ಅದೇ ಪ್ರಶ್ನೆ. ಮತ್ತೆ ತತ್ತರಿಸಿದಳು, ಗಡಗುಟ್ಟಿದಳು, ನಡುಗಿದಳು. ಗಂಡನ ಭಯಂಕರ ಸ್ವರವನ್ನು ಕೇಳಿ ಮಾದೇವಿಯ ಮೆಯ್ಯೆಲ್ಲ ತಣ್ಣಗೆ ಬೆವರೊಡೆದಿತು....ಇದೇ ಮೊದಲ ಬಾರಿ, ಗಂಡನಿಂದ ಇಂತಹ ಮಾತು ಕೇಳಿದುದು....ತಲೆ ಸುತ್ತತೊಡಗಿತು. ಮೆಯ್ಯೆಲ್ಲ ಕೋಡಿಡಂತಾಗಿ, ಕಾಲು ಶಕ್ತಿಗುಂದಿ ಕುಸಿಯುತ್ತಿರುವಂತೆ ತೋರಿತು. ಎದೆ ಕುದಿದು ಉಕ್ಕುತ್ತಿರುವಂತೆ ಭಾಸವಾಯಿತು....ಆದರೂ ಕಳಚಿದ ಧೈರ್ಯವನ್ನೆಲ್ಲ ಒಂದು ಬಾರಿ ಒಟ್ಟುಗೂಡಿಸಿ ಹೇಳಿದಳು:

ಅಕ್ಕನ್ಮ ಬಂದಿದ್ಲು ಕುಬುಸ ಕಣ ತಂದಿದ್ಲು
ಕುಬುಸ ಕಣ ತಂದಿದ್ಲು ಅಲ್ಲೆ ತೊಡುತ್ಹಾಕ್ಯಂಡೆ

ಗಂಡ ತಾಳ್ಮೆಮೀರಿದ ವಿಚಿತ್ರಸ್ವರದಿಂದ ಗರ್ಜಿಸುತ್ತಾನೆ:

ತೊಡುವುದೆಷ್ಟೊತ್ತೆ ಮತ್ತೆ ಬರುವುದೆಷ್ಟೊತ್ತೆ

ಆತ ಎದ್ದು ನೆಲವನ್ನು ತುಳಿಯುತ್ತ ಬಂದ ಸದ್ದಾಯಿತು. ಮಾದೇವಿಗೆ ಕಣ್ಣುಕಟ್ಟಿ ಬಂದಿತು. ಮತ್ತೆ ಕ್ಷಣದೊಳಗೆ ಪತಿ,

ಕದಗಳ ತೆರೆದನು ಒಳ್ಳೆ ಕತ್ತಿ ತಂದನು

ಬಾಗಿಲನ್ನು ತೆರೆದು, ವೀರಭದ್ರನಂತೆ, ಮಸೆದ ಹೊಸ ಕತ್ತಿಯನ್ನು ಹಿಡಿದು ಕಣ್ಣನ್ನು ಕೆಂಡವಾಗಿಸಿಕೊಂಡು ನಿಂತ ಪತಿಯನ್ನು ನೋಡಿ 'ಅಯ್ಯೋ' ಎಂದು ಕೂಗಿಕೊಂಡಳು ಮಾದೇವಿ. ಆಕೆಗೆ ಪೂರ್ಣ ನಿಶ್ಚಯವಾಗಿ ಹೋಯಿತು, ತನ್ನ ಕಾಳವ್ಯಾಪಾರಗಳೆಲ್ಲ ಗಂಡನಿಗೆ, ಮನೆಯವರಿಗೆ, ಮಾತ್ರವಲ್ಲ ಊರಿಗೇ ಹೇಗೋ ತಿಳಿದುಹೋಯಿತೆಂದು. ಆತನ ಕಾಲಿಗೆರಗಿ ಕ್ಷಮೆ ಬೇಡಿದರೆ? ಒಮ್ಮೆ ಎಚ್ಚರತಪ್ಪಿ ಆದುದಾಯಿತು; ಮತ್ತೆ ಇಂತಹ ಅಪಚಾರವಾಗದಂತೆ....ಅಷ್ಟು ಯೋಚಿಸುತ್ತಿರುವಂತೆಯೇ ಆತ,

ಕತ್ತಿ ತಂದನು ಹೆಂಡತಿ ರಟ್ಟೆ ಹಿಡಿದನು

ಇನ್ನು ಮಾದೇವಿ ಅಲುಗುವಂತಿಲ್ಲ. ಭೂಕಂಪದಿಂದ ನಡುಗುವ ಶಿಲಾಪ್ರತಿಮೆಯಂತೆ ಪತಿಯ ತೋಳಿನಲ್ಲಿ ಸಿಕ್ಕು ತತ್ತರಿಸಿದಳು ಆಕೆ.

ಅವಳ ನಾಲಗೆ ಒಣಗಿಹೋಯಿತು. ಗಂಟಲು ಕಟ್ಟಿಕೊಂಡಿತು. ಆಕೆಯ ಸರ್ವಸ್ವವೂ ಸ್ವಾಧೀನ ತಪ್ಪಿ ಗಂಡನ ರಟ್ಟೆಯೊಳಕ್ಕೆ ಸೇರಿಕೊಂಡಿತು. ಆತ ಒಂದು ಮಾತನ್ನೂ ಆಡಲಿಲ್ಲ.

ರಟ್ಟೆಹಿಡಿದನು ಮಾದೇವಿ ಒಳಗೆ ಎಳೆದನು
ಒಳಗೆ ಎಳೆದನು ಮೂರು ಕೊರೆ ಕಡಿದನು
ಮೂರು ಕೊರೆ ಕಡಿದನು ಹೊರಗೆ ಒಗೆದನು
ಹೊರಗೆ ಒಗೆದನು ತಣ್ಣೀರು ಸ್ನಾನ ಮಾಡ್ಯಾನು

—ಮುಗಿಯಿತು ಮಾದೇವಿಯ ಕಥೆ. ತನ್ನ ಕೆಲಸ ತೀರಿಸಿ, ತಣ್ಣೀರು ಸ್ನಾನ ಮಾಡಿ ಮನೆಯೊಳಗಣ ಕತ್ತಲಿನಲ್ಲಿ ಕುಳಿತ ಆ ಶ್ಮಶಾನರುದ್ರ. ಹೊರಗೆ, ಹಾಲು ಚೆಲ್ಲಿ ನಗುವ ತಿಂಗಳಬೆಳಕಿನಲ್ಲಿ ಕಣ್ಣು ಮಿಟುಕಿಸುವ ತಾರಕ್ಕಿಗಳ ಕೆಳಗೆ ರಕ್ತಸಿಕ್ತವಾಗಿ ಬಿದ್ದಿದ್ದವು, ಮಾದೇವಿಯ ಚೆಲುವಾದ ದೇಹದ ಮೂರು ತುಂಡುಗಳು !

ತಂಗಾಳಿ ಬೀಸುತ್ತಲೇ ಇತ್ತು !



## ೧೨. ಬಾಳಿರಲಿ ಬೆಳಕಿಗರಳುವ ಹೂವಾಗಿ

ತಾಯಿತಂದೆಯರ ಬಿರುಮಾತೇ ದೊಡ್ಡ ಕಷ್ಟವೆಂದು ಮನೆಯೆದುರಿನ ಮಲ್ಲಿಗೆ ಬೀತುದೇ ದೊಡ್ಡ ನಷ್ಟವೆಂದು ಯೋಚಿಸುತ್ತಿದ್ದ ಬಾಲೆ, ಕಣ್ಣರಳಿ ಸುತ್ತು ಮುತ್ತ ನೋವಿನ ಬಣ್ಣ ಕಂಡು ಬಳಲಿದಳು. ಆ ಬಣ್ಣ ಅಳಿಸುವೆನೆಂದು, ತಾನಂತೂ ಆ ಬಣ್ಣದ ನೆಳಲು ಸೋಕದಂತೆ ಬಾಳುವೆ ನೆಂದು ಹಸಿಗನಸು ಕಂಡಳು. ಅನಂತರ, ಮನೆಯವರು ಆಯ್ದು ತಂದ ತರುಣನ ಕೂಡ ಮನೆದುಂಬಿದ ಹೊಸದರಲ್ಲಿ, ಆತನ ಕುಡಿಮೀಸೆ ತನ್ನ ಕನಸುಗಳೊಂದಿಗೆ ಚಕ್ಕಂದವಾಡಿ ಕಚಗುಳಿಯಿಟ್ಟಿರಲು, ತುಂಬ ಹಿತವಾಗಿ ಹಗುರವಾಗಿ ದಿನಗಳನ್ನು ದಾಟಿದಳು....ಮುಂದಿನದು ಲೋಕದ ಎಂದೆಂದಿನ ಕಥೆ...ಈಗ ಆಕೆ ನಡುಹರಯದ ಗರತಿ; ಹಲವು ಮಕ್ಕಳ ತಾಯಿ; ಹಗಲಿರುಳುಗಳು ಒಂದಾದಮೇಲೊಂದು ಅದ್ದಿ ಅದ್ದಿ ಹದಗೊಳಿಸಿರುವ ಹಾಲೆದೆಯ ತಾಯಿ....

ಚುಮುಚುಮು ನಸುಕಿನಲ್ಲಿ ಹೊಸಲಿಗೆ ರಂಗೋಲೆಯಿಕ್ಕುತ್ತಿರು ವಾಗ, ರಮಿಸಿ ತಟ್ಟಿ ಮಲಗಿಸಿ ಬಂದಿದ್ದ ಮಗು ಎದ್ದು ಅಳುವಿನ ದನಿಯಲ್ಲಿ ಅಮ್ಮಾ ಎನ್ನುತ್ತ ತೋಳು ತೆರೆದು ಓಡಿ ಬರಲು ಆಕೆ ರಂಗೋಲೆ ಬಿಟ್ಟು ಮಗುವನ್ನು ಕಂಕುಳಿಗೆ ಕೊಳ್ಳುತ್ತ ಧನ್ಯಳೆಂಬಂತೆ ತನ್ನಷ್ಟಕ್ಕೇ ಹಾಡಿ ಕೊಳ್ಳುವುದುಂಟು:

ಕಷ್ಟ ಬ್ಯಾಡೆಂದರೆ ದುಷ್ಟಳಾದೇನು ಸ್ವಾಮಿ
ಕಷ್ಟಿರಲಿ ನಿನ್ನ ಕರುಣೆರಲಿ
ನಷ್ಟ ಬ್ಯಾಡೆಂದರೆ ಭ್ರಷ್ಟಳಾದೇನು ಸ್ವಾಮಿ
ನಷ್ಟಿರಲಿ ನಿನ್ನ ಕರುಣೆರಲಿ
ಕಷ್ಟನಷ್ಟಗಳಿರಲಿ ಮ್ಯಾಲೆ ಕರುಣವಿರಲಿ
ಅಷ್ಟಿರುವ ಬದುಕು ನೂರಿರಲಿ

—ರಸದಲ್ಲಿ ಹದ ಬೆಂದ ಜೀವದ ಸಹಜ ಪರಿಮಳ ಅದು: ತನಗೆ ಕಷ್ಟ ಬೇಡವೆನ್ನುವಾತ ಅದನ್ನು ಮತ್ತೊಬ್ಬರ ತಲೆಗೆ ಚಿಮ್ಮಿಸಬೆಸ್ನಿಸುತ್ತಾನೆ.

ತಾನು ಪಡುವ ಪಾಡು ತಡೆದು ನಿಲ್ಲಿಸಲಾರನಾದರೂ ಸಂಗಡ ಹೆರವರಿಗೂ ಪಾಡು ಕೊಡುತ್ತಾನೆ. ತನಗೆ ಕಷ್ಟ ಬೇಡವೆಂಬುದೇ ದುಷ್ಟತನ; ಮಾತ್ರ ವಲ್ಲ, ಇದೊಂದಲ್ಲದೆ ದುಷ್ಟತನ ಬೇರೆ ಇಲ್ಲ. ಅವನ ಕರುಣೆಯೊಂದಿದ್ದರೆ ಕಷ್ಟವೂ ಸಹ್ಯ; ಆ ಕರುಣೆಗಾಗಿಯಾದರೂ ಹಲವೊಮ್ಮೆ ಕಷ್ಟ ಅಪೇಕ್ಷ ಣೀಯ. ನಷ್ಟವೂ ಹಾಗೆಯೇ. ನನಗೆ ನಷ್ಟ ಬೇಡ ಎಂಬ ಮಾತಿನ ಮನೋಭಾವ ಸ್ವಾರ್ಥದ್ದು. ಸ್ವಾರ್ಥ ಬಿಟ್ಟು ಭ್ರಷ್ಟತನ ಬೇರಿಲ್ಲ. ಕರುಣೆಯ ಸೀಮೆಯಲ್ಲಿ ನಷ್ಟವೂ ಒಂದು ಮಹತ್ ಲಾಭ....

ಸ್ವಚ್ಛ ಕಣ್ಣುಗಳಲ್ಲಿ ಬದುಕನ್ನು ಬದುಕಿನ ಬಣ್ಣಬಣ್ಣಗಳನ್ನು ಹಾಡಿದ ಆ ತಾಯಿಯ ಮಾತಿಗೆ ನಾವೇನು ವ್ಯಾಖ್ಯೆ ಬೆಳಸಿಯೇವು? ಈಶಾವಾಸ್ಯ ಕಂಡ ಋಷಿವಾಣಿಗೆ ಹೇಗೆ ವ್ಯಾಖ್ಯೆ ರೂಕ್ಷವಾದೀತೋ ಹಾಗೆ ಈ ಮಾತೃವಾಣಿಗೂ ವ್ಯಾಖ್ಯೆ ರೂಕ್ಷ.

* * * *

ಹಾಲೆದೆಯ ಆ ಗರತಿ ಮುಂಜಾವದಲ್ಲಿ ಯಾವ ಬದುಕನ್ನು ಕುರಿತು ಹಾಡಿದಳೋ ಆ ಬದುಕಿಗೆ ಜಯವಾಗಲಿ.

ಜೀವನವನ್ನು ಭವ್ಯವೆಂದು ಸಂಭಾವಿಸಿ ಸಂಜೀವನವನ್ನಾಗಿಸಿದ ಆ ತಾಯಿಗರತಿಯ ಸಂಪ್ರದಾಯದವರು ನಮ್ಮ ಜಾನಪದ ದೀಪಧಾರಿಗಳು. ಯಾರ ಸತ್ಸಂಭಾವನ ಒಂದೆಡೆ ಮಾದರಿಯಾಗಿ ಕಾವ್ಯವಾಗಿ, ಇನ್ನೊಂದೆಡೆ ಪ್ರಯೋಗವಾಗಿ ಜೀವನವಾಗಿ ಪ್ರಕಟವಾಯಿತೋ ಅಂಥ ಜಾನಪದ ಋಷಿಕಲ್ಪರೇ ಈ ದೀಪಸಂಪ್ರದಾಯಕ್ಕೆ ಪ್ರವರ್ತಕರಾದರು. ತಮ್ಮ ಕಾವ್ಯ ಜೀವನಗಳಿಗೆಲ್ಲ ಮೂಲಸ್ತಂಭವಾದ 'ಸಂಭಾವನ'ಕ್ಕೆ ದೀಪದ ಸಂಕೇತ ಕೊಟ್ಟು ಇಟ್ಟು ಹೋದರು. ಅದೇ ದೀಪ ಇಂದಿಗೂ ಇಲ್ಲಿ ಮುಂದುವರಿಯು ತ್ತಿದೆ: ದೀವಳಿಗೆಯ ರಾತ್ರಿಗಳಲ್ಲಿ ಆ ಸಂಭಾವನ ದೀಪ ಮನೆಯಿಂದ ಮನೆಗೆ ಸಾಗುತ್ತದೆ. ಅದೇ ದೀಪದ ಬೆಳಕಿನಲ್ಲಿ ಇಂದಿಗೂ ಅಂದಿನವರ ಋಷಿವಾಕ್ಸಮೀಪವಾದ ಕಾವ್ಯವಾಣಿ ಅರಳಿ ಅರಳಿ ಕುಡಿವರಿಯುತ್ತಿದೆ. ದೀಪ ಕೊಂಡು ಹೋಗುವವನಿಗೆ ಮನೆಮನೆಯೂ ಪವಿತ್ರಕ್ಷೇತ್ರ, ಅದೊಂದು ಪುಣ್ಯಯಾತ್ರೆ — ಎಂಬ ಯಾವ ಸಂಭಾವನ ಈ ದೀಪಯಾತ್ರೆಯನ್ನು ಕಲ್ಪಿಸಿತೋ ಅದೇ ಸಂಭಾವನ ದೀಪ ಕೊಳ್ಳುವವರಲ್ಲಿ ಮೂಡಿತು; ಅವರಿಗೆ

ಇದೊಂದು ಸದ್ಯಃಪರವಿಶ್ರಾಂತಿ ಕೊಡುವ ನಿಷ್ಪರ್ಯಟನಯಾತ್ರೆಯಾಯಿತು, ಅವರ ಭಕ್ತಿಪೂರ್ಣ ಪುರಸ್ಕಾರ ಪಡೆಯಿತು.

ಆ ಸಂಭಾವನವನ್ನು ಆವಾಹಿಸಿಕೊಳ್ಳಲೆಂದೇ ಈತನಕ ಕೆಲವು ದೀಪಗೀತೆಗಳನ್ನು ಪರಿಭಾವಿಸಿದೆವು. ಈ ವರೆಗಿನ ಪರಿಭಾವನದ ಉಪ ಸಂಹಾರವಾಗಿ ಅಂಥದೇ ಹಲವು ಗೀತಗಳಿಂದಾಯ್ದ ಕೆಲಕೆಲವು ಮುಕ್ತಕ ಗಳನ್ನುಅನುಭಾವಿಸೋಣ.

* * * *

ಆದ್ಯಂತ ಶುಚಿಯಾದ ಭವ್ಯ ಜೀವನವನ್ನು ಕಟ್ಟುವುದೇ ಇವರ ಕಾಣ್ಕೆ. ಪವಿತ್ರ ಕ್ಷಣಗಳನ್ನು ಎತ್ತಿ ಎತ್ತಿ ಬಾಳುವುದು ಅಥವಾ ಆಯ್ದು ಆಯ್ದು ಹಾಡುವುದು ಅವರ ಗುರಿಯಲ್ಲ. ಅವರಿಗೆ ಜೀವನದ ಕ್ಷಣಕ್ಷಣವೂ ಬದುಕುವುದಕ್ಕೆ ಗುರುಕ್ಷಣ, ಹಾಡುವುದಕ್ಕೆ ರಸಕ್ಷಣ. ಆದ್ದರಿಂದಲೇ ಅವರ ಕಾವ್ಯದಲ್ಲಿ ನಾಯಕನಿಷ್ಠೆ ಕಡಿಮೆ; ಪುರಾಣಗಳಿಗೆಲ್ಲ ಪವಾಡ ಅತ್ಯಗತ್ಯವಲ್ಲ ಮತ್ತು ಪವಾಡಗಳು ಪುರಾಣಗಳಲ್ಲೆಂತೊ ಅಂತೆಯೆ ನಿತ್ಯಜೀವನದಲ್ಲೂ ಸಹಜ.

ನಿದರ್ಶನಕ್ಕೆ ಯಾವುದೇ ವಿಷಯ ತೆಗೆದುಕೊಳ್ಳಬಹುದು. ನಮ್ಮ ಜೀವನದಲ್ಲಿ ಅತ್ಯಗತ್ಯವಾಗಿದ್ದು ಕೂಡ, ನಿತ್ಯವೆಂದು ನಿರ್ಭಾವಿತವೂ ದೈಹಿಕವೆಂದು ಉದ್ಧೃತಿಗೆ ಅಯೋಗ್ಯವೂ ಆದ 'ಊಟ'ವನ್ನೇ ನೋಡ ಬಹುದು. ಅವರಿಗೆ ಊಟವೆಂದರೆ ಕೂಳು ತಿಂದು ಕೈತೊಳೆದುಕೊಳ್ಳು ವುದಲ್ಲ. ಅದು ಒಡಲು ತುಂಬುವುದು ಮಾತ್ರವಲ್ಲ, ಗರತಿಮೆಯ್ಯಿನ ಮಡಿಲು ತುಂಬುವುದಾಗಿದೆ. ಅದೊಂದು ಅನಾದಿವ್ರತ, ಮೂಲಯಜ್ಞ. ಅದರ ಭಾವಸತ್ತ್ವ ಹೇಗೆ ಹೊಳೆದಿದೆ ನೋಡಿ ಇಲ್ಲಿ:

ಹರವು ಕುಡಿ ಬಾಳೇಲಿ ಹಾಲನ್ನನುಂಡಾನು
ತುತ್ತುತುತ್ತಿಗು ತಣಿದಾನು-ತೇಗ್ಯಾನು
ಸ್ವಾಮಿ ಶರಣೆಂದು ಎದ್ದಾನು

ಮಾರ್ಗಕಾವ್ಯದ ನಮ್ಮ ಆಲಂಕಾರಿಕರ ದೃಷ್ಟಿಯಲ್ಲಿ ಭೋಜನ ಅನಿರ್ದೇಶ್ಯ, ಸ್ವಭಾವೋಕ್ತಿಗೆ ಕಾವ್ಯದಲ್ಲಿ ಸ್ಥಾನವುಂಟೆಂಬುದೇ ಸಂದೇಹ. ಅವನ್ನೆಲ್ಲ

ಮೀರಿ ನಿಂತಿದೆ ಇಲ್ಲಿನ ಸರಲವೂ ಶುಚಿಯೂ ಆದ ತೃಪ್ತಭಾವ. ಇಲ್ಲಿಯೇ ಜಾನಪದಕಾವ್ಯದ ರಹಸ್ಯವಿದೆ; ಸಂಭಾವನದ ಮರ್ಮವಿದೆ.

ಊಟವಾದಮೇಲೆ ವೀಳೆಯ ಮೆಲ್ಲುವ ಸವಿಯಾದರೂ ಕಡಿಮೆಯೆ?

ಹಾಲಾರದಡ್ಡಸಿಯಡಕೆ ನೀರಾರದ ಕೆನೆಸುಣ್ಣ
ಚೀನಿಕರುಪುರದ ಬಿಳಿಯೆಲೆ–ಯಾಲಕ್ಕಿಕೂಡಿ
ಸೊಗಸೀಲೊಂದೀಳ್ಯ ಸವಿಮೆದ್ದ

ಅಲ್ಲಿ ಸಂಭಾವನ, ಇಲ್ಲಿ ರಸಿಕತೆ. ವೀಳೆಯ ಊಟದ ಮುಡಿ ಹೇಗೋ ಹಾಗೆ ರಸಿಕತೆ ಸಂಭಾವನದ ಕುಡಿ. ಅದರಂತೆಯೇ ನಿದ್ರೆಯನ್ನು ಕುರಿತು :

ಬೀಸುವಮಂಚದ ಮ್ಯಾಲೆ ಹಾಸಿಲೊರಗ್ಯಾನು ರಾಯ
ತೋಳ ತಲೆಗಿಟ್ಟು ನಿದ್ದೇಲಿ–ನಲಿವಾಗ
ಝುಮ್ಮ ಝುಮ್ಮೆಂದಾವು ಚಳೆಮಂಚ

ನಿದ್ರೆಯಡಿಯಲ್ಲಿಯೂ ನಲವಿನುಕ್ಕು ಚಿಗುರೊಡೆಯುವ, ಮಂಚದ ಸದ್ದಿನಲ್ಲಿ ಮತ್ತೇನೇನೋ ಧ್ವನಿತವಾಗುವ ವಾಚಾಳಿ ನಿದ್ರೆ ಇದು. ಇದೇ ಬೇರೊಂದೆಡೆಯಲ್ಲಿ ಹೀಗೆ ಬದಲಾಗಿ ಬರುತ್ತದೆ:

ಹಾಸುಮಂಚದ ಮ್ಯಾಲೆ ಹರವುಹಾಸಿಗೆಲೊರಗಿ
ತೋಳು ತಲೆಗಿಟ್ಟು ಕಣ್ಣುಮುಚ್ಚಿ–ನಿದ್ದಿಸುವಾಗ
ದಿಟ್ಟ ಬಿದ್ದಾವು ನಿಮು ನೋಡಿ

'ದಿಟ್ಟ ಬಿದ್ದಾವು' ಯಾಕೆ?-ಏನೋ! ಆ ಕುರಿತ ಕವಿಯ ಮೌನ ನಮ್ಮಲ್ಲಿ ಧ್ವನಿಪ್ರತಿಧ್ವನಿಗಳನ್ನು ಮಿಡಿಯುತ್ತದೆ; ಅಂತ್ಯದಲ್ಲಿ ಅವೆಲ್ಲ ಅಡಗಿ ನಮ್ಮನ್ನು ನಿದ್ರೆಯ ಮೌನದೊಂದಿಗೆ ಸಂಲಗ್ನಗೊಳಿಸಿಬಿಡುತ್ತದೆ.

ಈ ಜೀವನಕೀರ್ತನಗಳಲ್ಲಿ ನಮ್ಮನ್ನು ಅಚ್ಚರಿಪಡಿಸುವಂಥ ಹಾಗೂ ಜಾನಪದ ಕಾವ್ಯದ ಮರ್ಮವನ್ನು ಹೊಳೆಸುವಂಥ ಒಂದು ಕೀರ್ತನವಿದೆ. ಅದು ಶ್ರಮದ ಕೀರ್ತನ, ಶ್ರಮದಿಂದ ಬರುವ ಸೌಂದರ್ಯದ ಕೀರ್ತನ:

ಗಣ್ಣ ಗದ್ದೆ ಕಡಿದು ಮಣ್ಣಾಗಿ ಬಂದೋನೆ
ಮಣ್ಣಾಡಿದ ಆನೆ ಮರಿ ಹಂಗೆ–ತಮ್ಮಯ್ಯ
ಕಣ್ಣ ಬಿದ್ದಾವು ಒಳಬಾರೊ

ಅನುಕೂಲಸ್ಥಾಯಿಗಳಿಗೆ ಅಭಿಮುಖವಾಗಿರುವ ಈ ತೃಪ್ತಿಭಾವಗಳಿಂದ ಜೀವನದ ಒಂದು ಮುಖ ಹೊಳೆಯುತ್ತದೆ. ಇದರ ಇನ್ನೊಂದು

ಮುಖವೂ ಹೊಳೆಯದಿದ್ದರೆ ಇಲ್ಲಿನ ಕಾವ್ಯರಾಶಿ ಮುಗ್ಧ ಮನಸ್ಸಿನ ಆಭಾಸ-ಆದರ್ಶವಾಗಿಬಿಡುತ್ತಿತ್ತು, ಗುಳ್ಳೆ- ಊಹೆಯಾಗಿಬಿಡುತ್ತಿತ್ತು, ಹಗುರ-ಹತ್ತಿಯಾಗಿಬಿಡುತ್ತಿತ್ತು. ಹಾಗಾಗಿಲ್ಲವೆಂದೇ ಇದು ಕಾವ್ಯಪ್ರಸ್ಥಾನದಲ್ಲಿ ಪ್ರತಿಷ್ಠೆಗೊಂಡಿದೆ. ಜೀವನದ ಯಾವ ಮುಖವನ್ನೂ, ಒಂದೇ ಸ್ಥೈರ್ಯದಿಂದ ಎದುರು ನಿಂತು ಕಣ್ಣು ಕುರುಡಾಗಿಸಿಕೊಳ್ಳದೆ, ಕಾಣಬಲ್ಲ ಸತ್ತ್ವ ಕೆಳಗಿನ ಉದಾಹರಣೆಗಳಲ್ಲಿ ಅನಾವೃತವಾಗಿದೆ.

ಇಲ್ಲಿ ಮೂರು ಪಾದಗಳಲ್ಲಿ ದಾರಿದ್ರ್ಯ ನೆಲತುಂಬಿ ಬಾನಿನುದ್ದ ತಲೆಯೆತ್ತಿ ನಿಂತಿದೆ ತ್ರಿವಿಕ್ರಮಾವತಾರ ತಾಳಿ :

ಬಡವರು ಸತ್ತರೆ ಸುಡಲಿಕೆ ಬೆಂಕಿಲ್ಲ
ಒಡಲ ಕಿಚ್ಚಾಗೆ ಹೆಣ ಬೆಂತೋ-ಶಿವಶಿವ
ಬಡವರಿಗೆ ಸಾವ ಕೊಡಬ್ಯಾಡ

ಇಲ್ಲಿ ಹಸಿವೆಯ ಹದ್ದು ರೆಕ್ಕೆ ಪಟಪಟಿಸಿದೆ :

ಬರಬಂದ ಕಾಲಕ್ಕೆ ಹೊಟ್ಟೆ ಹರವಾದವು
ಮಕ್ಕಳ್ಹುಟ್ಯಾವು ಮತ್ತೆಂಟು-ಮರುದಿನವೆ
ಹೊಟ್ಟೆ ಹೊಟ್ಯೆಂತ ಸತ್ತವು

ಇಲ್ಲಿ ಬಂಜೆತನ ಬಾಯ್ಬಡಿಯುತ್ತಿದೆ:

ಸಂಜೆಗೆ ಕೊಟ್ಟು ನೀ ಮುಂಜಾವ ಕೊಳ್ಳಯ್ಯ
ಬಂಜೆಂಬೊ ಶಬುದ ಮರೆಸಯ್ಯ

ಇಲ್ಲಿ ಸಾವು ಹೆಪ್ಪುಗಟ್ಟಿರಲು ಶೋಕ ಝೇಂಕರಿಸಿದೆ :

ಅರಗಿಣಿಯೆಂದರೆ ಆರೆನಿದ್ದೆಲೆದ್ದಾಕೆ
ಮರವೇಲು ಮಾತ ಬಿಡದಾಕೆ-ನನ ಮುದ್ದು
ಮರಗಟ್ಟಿ ನೆಲಕೆ ಬಿದ್ದ್ಯಲ್ಲೇ
ಮರಗಟ್ಟಿ ನೆಲಕೆ ಬಿದ್ದ್ಯಲ್ಲೆ-ಗೆಜ್ಜರಿದ
ಸರಪ್ಪಂಗೆ ನೆಲಕೆ ಬಿದ್ದ್ಯಲ್ಲೇ

* * * *

ಪ್ರಕೃತಿವರ್ಣನದ ಮಾದರಿಗೆಂದು ಋತುವರ್ಣನದ ಎರಡು ಮುಕ್ತಕಗಳನ್ನು ಇಲ್ಲಿ ನೋಡಬಹುದು. ಒಂದರಲ್ಲಿ ಮಳೆಗಾಲದ ಅದ್ಭುತ ತಾನೇ ತಾನಾಗಿ ವಿಜೃಂಭಿಸಿ ಮಾನವಲೋಕವನ್ನು ಮರೆಸಿಬಿಟ್ಟಿರುವ ಸೊಗಸಿದೆ; ಇನ್ನೊಂದರಲ್ಲಿ, ಅಲ್ಲಿ ಮಂಜಿನಲ್ಲಿ ಇಲ್ಲಿ ಮಾವಿನಲ್ಲಿ ಕಂಡೂ ಕಾಣದಂತೆ ಮೈದೋರಿದ ಮಾಗಿ ಮಾನವ ಹೃದಯವನ್ನು ಹದವಾಗಿ ಮೀಟಿ ಹಗುರ ಕುಣಿಸಿರುವ ಸೊಬಗಿದೆ.

ಮಲೆನಾಡಿನ ಕಾರ್ಗಾಲದ ಅದ್ಭುತವೈಭವ ಅಷ್ಟೇ ಭವ್ಯವಾಗಿ ಮೊಳಗಿರುವ ಸಾಲುಗಳಿವು:

ಬಾನ ಬಯಲಿನಾಗೆ ಬರುವಾಗ ಮಳೆರಾಯ
ಭೋರೆನುವ ಭಾರಿ ತೇರೇರಿ
ಭೇರಿ ಮದ್ದಳೆ ಮೊಳಗ್ಯಾವು ಎಲ್ಲೆಲ್ಲು
ಹಾದಿ ದೀವಟಿಗೆ ಬೆಳಗ್ಯಾವು

ಮಾಗಿಯ ಚೆಲುವನ್ನು ಮಾವಿನಲ್ಲಿ ತುಂಬಿಸಿ ನೆತ್ತರಿನ ಕನ್ನಡಿಯಲ್ಲಿ ಬಿಂಬಿಸಿಕೊಟ್ಟಿರುವ ಸಾಲುಗಳಿವು:

ಮಾಗಿಯು ಕಾಲಕ್ಕೆ ಮಾಪಿನಂಥ ಹೂವಿಲ್ಲ
ಮನೆಯಾಗೆ ಬೆಂಕಿ ಸಮನಿಲ್ಲ–ಮಾತಿಗೆ
ಮಾವನ ಮಗಳಂಥ ಜೊತೆಯಿಲ್ಲ

ನೂರಾರು ಹರಿಯೊಡೆದು ಹರಿಹರಿಯಲ್ಲಿಯೂ ಎಲೆಯುದುರಿ ಮೈಯ್ ತುಂಬ ಚಿನ್ನದ ಹೂಬಟ್ಟಲುಗಳನ್ನರಳಿಸಿಕೊಂಡು ನಿಂತಿರುವ ಕಣಿಗಲು ಮರವನ್ನು ಕುರಿತು:

ಕಣ್‌ಬಿಟ್ಟ ಕಂಗ್ಯಾದಿಗಿ ಹರವಾದ ಹೊಂಗ್ಯಾದಿಗಿ
ಪರಿಮಳದ ರಥವೊ ಕಣಿಗಲೊ

ಅಲ್ಲೊಂದು ಇಲ್ಲೊಂದು, ಗರಿಯ ಮರೆಯಲ್ಲಿ ಗರತಿಯಂತೆ ಕಣ್ಣು ಹೊಳೆಸಿ ಅಥವಾ ಅಗಲ ಹೆಡೆಬಿಚ್ಚಿ, ಕಂಪು ತೇಲಿಸುವ ಕೇದಗೆಯತ್ತ ನಮ್ಮ ಕಣ್ಣು ಸುತ್ತಿಸಿ ಅನಂತರ ಒಮ್ಮೆಲೇ ಪುಷ್ಪರಥವಾಗಿ ಪರಿಮಲಪಥವಾಗಿ ವಿಜೃಂಭಿ

ಸುವ ಕಣಿಗಲಿಗೆ ಎದುರು ನಮ್ಮನ್ನು ಧತ್ತೆಂದು ನಿಲ್ಲಿಸುವ ಸೊಬಗು ಎಂಥದು!

* * * *

ಮಕ್ಕಳನ್ನು ಕುರಿತ ಮುತ್ತುಗಳಿವು:

ಒಲ್ಲೆನೆಂದು ಹಟಮಾಡಿದ ಮಗುವನ್ನು ಹೇಗೋ ರಂಬಿಸಿ ಮೀಯಿಸಿ, ಮೆಯ್ಯೊರೆಸುವಾಗ ಆದರ ಚೆಲುವನ್ನು ಹಾಡುತ್ತಿದ್ದಾಳೆ ತಾಯಿ:

ಅಂಜುತ ಬಂದವ ಅಂದದ ಜಳಕ ಮಾಡಿ
ಸಂಜೆ ಹೊಳೆವಂಥ ಸೂರ್ಯಾದ-ನನ ಕಂದ
ಮುಂಜಾವರಳಿದ ಹೂವಾದ

ಮತ್ತೊಬ್ಬ ತಾಯಿ, ತೊಟ್ಟಿಲಲ್ಲಿಟ್ಟು ತೂಗಿದರೂ ನಿದ್ದೆಗೊಲ್ಲದ ತನ್ನ ಮುದ್ದು ಪುಂಡನನ್ನು ನಿದ್ದೆಗದ್ದುವ ಪ್ರಯತ್ನದಲ್ಲಿದಾಳೆ, ಗುಟ್ಟು-ಜೋಗುಳ ಹಾಡಿ:

ಆಲದ ಮರಕೆ ಬಂದಾನೆ ಗುಮ್ಮ
ಏಳೆಂಟು ಹಣ್ಣು ತಿಂದಾನೆ ಗುಮ್ಮ
ಸುಮ್ಮನೆ ಮಲಗಿಲ್ಲಿ ಬಂದಾನು ಗುಮ್ಮ
ಕಂದಯ್ಯ ಜೋ ನನ್ನ ಚಂದಯ್ಯ ಜೋ

* * * *

ಹೆಣ್ಣಿನ ಚೆಲುವನ್ನು ಹೊಗಳುವ ಗೀತೆಗಳಿವು:

ಒಬ್ಬಾಕೆ ತನ್ನ ಮುಡಿ ಸಿಂಗರಿಸಿಕೊಳ್ಳುವ ತರಾತುರಿಯಲ್ಲಿದ್ದಾಳೆ:

ಉಪ್ಪರಿಗೆ ಮ್ಯಾಲೆ ಹೋದಾಳು ಕೆಂಚಮ್ಮ
ಚಿತ್ತಾರದ ಕೊಡನ ಹಣಿಯೆಣ್ಣೆ-ಕೊಂಡಳು
ತುಂಬುಗೂದಲನೆ ಕೆಲಬಾಚಿ-ಬಲಬಾಚಿ
ಗಿಂಡಿಲಂದದಲಿ ತುರುಬಿಕ್ಕಿ-ಕೆಂಚಮ್ಮ
ಅಚ್ಚಮಲ್ಲಿಗೆಯ ಮುಡಿದಳು

ಇನ್ನೂ ಮೀಸಲು ಮುರಿಯದ ಮುಗ್ಧ ನೋಟದ ಜಾಣೆಯೊಬ್ಬಳನ್ನು ಹೊಗಳಿ ತನಗೆಮಾಡಿಕೊಳ್ಳಲೆತ್ನಿಸುತ್ತಿದ್ದಾನೆ ಒಬ್ಬ ಚೆಲುವ:

ಕಂಬ ಸಾರುವ್ಹೋಳೆ ಕೆಂಬಲ್ಲು ನಗುವ್ಹೋಳೆ
ಇಂಬಾಗಿ ಸೀರೆನುಡುವ್ಹೋಳೆ–ಕಪ್ಪುರದ
ಗೊಂಬೆ ಬರುತೀಯೇನೆ ನಮುಕೂಟ

ಕಂಬ ಸಾರಿದ ಆಕೆ ಮುಖ ತಿರುವಿ ನಕ್ಕಾಗ ಅವಳ ಇಂಬು ಸೀರೆ ಸಂಭ್ರಮಿಸಿದ ಬಗೆ ಕಂಡು ಆಕೆ ತನಗಾದಾಳೆಂದು ನಿರ್ಧರಿಸಿ, ಆತ ಆಕೆಯ ಬಗೆಯ ಸೆರಗಿಗೊಂದು ಕಿಡಿ ತಾಗಿಸಿ ಅಲ್ಲಿಂದ ನಡೆದುಬಿಡುತ್ತಾನೆ :

ಕರಿಯು ಕಬ್ಬಿನ ಕೋಲ ಬಡ್ಡೆಯು ಗಣ್ಣಂಗೆ
ಒಡೆದು ಮೆದ್ದರೆ ಸವಿರುಚಿ–ಸಕ್ಕರೆ
ಬಂದು ನೋಡೆ ನಮ್ಮ ಗೆಣೆತನ

ಬಾಲ್ಯ ಮೀರಿ ಹರಯದ ಹೊಸತಿಲಲ್ಲಿ ಕಾಲಿಡುತ್ತಿರುವಾಕೆಯೊಬ್ಬಳು ಕೆರೆಯಲ್ಲಿ ತನ್ನ ತನಿಯೆದೆಯ ತೊರೆಯಾಡುತ್ತಿರುವ ಚಿತ್ರ ಇದು :

ತ್ವಾಟದಾಗಿನ ಕೆರೆಲಿ ಆಟವಾಡುವಾಕೆ
ಮಾಟದ ಮುಕ ನೋಡಿ ನಗುವಾಕೆ—ಗಿಣಿಬಂದು
ಆಟಕೆ ನೀರ ಕಲಕ್ಯಾವೆ–ತಂಗಾಳಿಗೆ
ನೀಟುಸೀರೆ ನೆರಿ ಕೊಂಕ್ಯಾವೆ

ಇಲ್ಲಿನ ಈಷತ್‌ಸ್ಪಂದನದ ಧ್ವನಿ ನಮ್ಮ ಎದೆಯ ಹರವೆಲ್ಲವನ್ನೂ ತುಂಬಿ ಮೃದುವಾಗಿ ಆಲಾಪಿಸಬಲ್ಲುದು.

* * * *

ಆಕಾಶದ ಮ್ಯಾಲೆ ತಾರಿಕೆ ಮೂಡಿದ್ದಂಗೆ
ಕುಂತಂತ ಸಭೆಗೆ ಕುಶಲಾಗಿ

ಪರಿಣಮಿಸಲಿ ತಮ್ಮ ಹಾಡು ಎಂಬುದು ಈ ದೀಪ ನೀಡುವವರ ಹಾರೈಕೆ. ಇಲ್ಲಿ ಕುಶಲ ಕಾಣದ ರಸಿಕ ಇನ್ನೆಲ್ಲಿ ಕುಶಲ ಕಂಡಾನು ?

....ಅವರ ಜೀವನಕಾವ್ಯಗಳೆರಡಕ್ಕೂ ಮೂಲವಾಗಿ, ಅವುಗಳಲ್ಲಿ ಮೈದುಂಬಿ ಮೀರಿ ನಿಂತಿರುವ ಯಾವ ಸಂಭಾವನವನ್ನು ನಾವು ಈಯುದ್ದ ಪರಿಮುಳಗೊಂಡೆವೋ ಅದನ್ನು ಮಾತಿನಲ್ಲಿ ಗುಡಿಕಟ್ಟಿ ನಿಲ್ಲಿಸಿದೆ ಇಲ್ಲಿ :

ಬೆಳಕು ಬಾಳುತಿರಲಿ ಬಾಳು ಬೆಳಕಾಗಿರಲಿ
ಹೂವು ಮುಂಜಾವು ತೆರನಾಗಿ–ಬಾಳಿರಲಿ
ಬೆಳಕಿಗರಳುವ ಹೂವಾಗಿ

ಯಾರ ಬದುಕು ದೀಪದ ಪದಕವಾಯಿತೋ, ಯಾರು ಹಾಡು ಕಟ್ಟುವ ನೆವದಲ್ಲಿ ಸವಿ ಬಾಳು ಮಿರುಗುವ ಹೊಸ ನಾಡು ಕಟ್ಟಲೆತ್ನಿಸಿದರೋ ಅಂಥ ಜಾನಪದ ದೀಪಧಾರಿಗಳು ನಮ್ಮ ನಾಡಿನ ಉದ್ದಗಲ ತೆರೆದಾರಿಗಳಲ್ಲಿ ಸದಾ ಯಾತ್ರೆ ನಡೆಸುತ್ತಿರಲಿ.

* * * *

ಮುಡಿಯಲ್ಲಿ ಅವರ ಮಂಗಲಪಾದಗಳೆರಡನ್ನು ಸ್ಮರಿಸಿ ಮುಗಿಸೋಣ :

ಮಂಗಲವೆನುವೆವು ಈ ಲೋಕಕೆ–ಸ್ವಾಮಿ
ಮಂಗಲ ಕರುಣಿಸು ಮೂಲೋಕಕೆ

ಸ್ವಸ್ತಿ.



# ಪ್ರಾದೇಶಿಕ ಶಬ್ದಕೋಶ

ಅಗೆಳ: ಕಂದಕ.

ಅಭೋ ಎನ್ನಿಸು: ಭಯಂಕರ ತೋರು.

ಅಂಬಾರ: ಆಕಾಶ.

ಅಡಿಕೆ: ರಜೆ, ಬಿಡುವು.

ಇಡಿಗಾಯಿ: ದೃಷ್ಟಿ ಪರಿಹಾರಾರ್ಥವಾಗಿ ಒಡೆಯುವ ಇಡಿಯ ತೆಂಗಿನ ಕಾಯಿ.

ಇಟ್ಟೆಲು: ತಂಟೆಯ ಹಸುಗಳ ಹಾಲು ಕರೆಯಲು ಅವುಗಳನ್ನು ಎರಡು ಗಳುವಿನ ನಡುವೆ ಆಚೀಚೆ ಚಲಿಸದಂತೆ, ಕೂಡಿಕೊಳ್ಳುತ್ತಾರೆ. ಅಂಥ ಗಳುವಿನ ಸಾಧನ 'ಇಟ್ಟೆಲು.'

ಈಟು: (ಈಸುಟು) ಇಷ್ಟು.

ಎಸರಕ್ಕಿ: ನೀರಿನಲ್ಲಿ ಕುದಿಯುವುದಕ್ಕಿಟ್ಟ ಅಕ್ಕಿ.

ಎತ್ತುಗಲ್ಲು: ಕಲ್ಲುಗಳನ್ನು ಕೈಮೇಲೆ ಹಾರಿಸಿ ಆಡುವ ಒಂದು ಬಗೆಯ ಆಟ; ಹೆಣ್ಣುಮಕ್ಕಳಲ್ಲಿ ಮೆಚ್ಚಾಗಿರುವಂಥದು.

ಒಡ್ಡು: ಚೆಲುವು, ಮೆರವಣಿಗೆ.

ಕಕ್ಕರ: ವಕ್ರವಾದ ಕೊಂಬೆ ಕೊಂಬೆಗಳಿರುವ.

ಕಡ: ಸಾಲ, ಋಣ.

ಕಡವ (ಕಡವೆ): ಜಿಂಕೆಯ ಜಾತಿಗೆ ಸೇರಿದ ಒಂದು ಪ್ರಾಣಿ.

ಕಂಡಿ: ತೂತು.

ಕರ: (ಹಸು ಅಥವಾ ಎಮ್ಮೆಯ) ಕರು.

ಕರ: ಬಹಳ.

ಕಾಕೆ: ಕಾಗೆ.

ಕಾಟ: ಒಂದು ರೀತಿಯ ಕಾಡುಕೋಣ.

ಕಿವಿ: ಕಿವಿ.

ಕುಡುಗಿ : ಕೊಡವಿ (ಕುಡುಗು–ಕೊಡವು).
ಕುಪ್ಪಳ : ನೆಗೆತ.
ಕುಂಟೆ : ಉರುವಲಾಗಿ ಬಳಸುವ ಮರದ ತುಂಡು.
ಕುರಕ : ಸಣ್ಣ ಜಾತಿಯ ಚಿರತೆ.
ಕೆಂಜೆರಗು : ಕೆಂಪು ಸೆರಗು.
ಕೊಚ್ಚುಪಾಲು : (ಕೊಚ್ಚು–ಅಕ್ಕಿಯನುಚ್ಚು) ಅಕ್ಕಿನುಚ್ಚಿನ ರಾಶಿ.
ಕೊರಡು : ಮರದ ತುಂಡು.
ಕೊರೆ : ತುಂಡು.
ಕೋಡುಬಳೆ ದೀಪ : ಕೋಡುಬಳೆಯ ಆಕಾರದಲ್ಲಿ ಬಟ್ಟೆಸುತ್ತಿ ಎಣ್ಣೆಯದ್ದಿ ಹಚ್ಚಿಡುವ ಪಂಜುದೀಪ.
ಕೋಳೆ : ಒಂದು ಬಗೆಯ ಸಣ್ಣ ತಾವರೆ (ಕುವಲಯ).
ಗಟ್ಟ : ಘಟ್ಟ, ಕಡಿದಾದ ಏರು.
ಗಣ್ಣ : ಹೊಲದ ತುಂಡು.
ಗಣ್ಣು : ಕಬ್ಬಿನ ಎರಡು ಗಂಟುಗಳ ನಡುವಣ ಭಾಗ, ಕಬ್ಬಿನ ಗಂಟು.
ಗದ್ದಲಿಸು : ಗರ್ಜಿಸು.
ಗಾಲಿ ಒಂಟೆ : ಕಿವಿಸುತ್ತ ಬರುವ ಒಂದು ತಂತಿ ಹಾಗೂ ಕೆಳಭಾಗದಲ್ಲಿ ಹರಳಿರುವ ಒಂದು ಬಗೆಯ ಕಿವಿಯ ಆಭರಣ : ಪುರುಷರದು.
ಗಿಡಪಾಲಾಗು : ಎತ್ತೆತ್ತಲೋ ಹೋಗು.
ಗಿಡಬೀಳು : ಕಾಡಿನಲ್ಲಿ ಎತ್ತೆತ್ತಲೋ ಓಡಿಹೋಗು.
ಗಿಂಡಿಲು : ಗಿಂಡಿ, ಸಣ್ಣ ಬಾಯಿಯ ದುಂಡು ಕುಡಿಕೆಪಾತ್ರೆ.
ಗುಂಡು : ಬಳಸು, ಸುತ್ತು.
ಗುದುಕು : ಧುಮ್ಮಿಕ್ಕು.
ಗುಳೆ : ಗುಂಪು.
ಗೆಲವು : ಉತ್ಸಾಹ.
ಚಂಗನೆ : ಒಮ್ಮೆಲೇ ಚಿಗಿದು.
ಚಚ್ಚಾಳಿ : (ಚಾಳಿ=ದುರಭ್ಯಾಸ) ಚಾಳಿ + ಚಾಳಿ ; (ಹಸು ಮುಂತಾದವು) ಸುಸೂತ್ರ ಹಾಲು ಕೊಡದಿರುವುದು.

ಚತುರ್ಭುಜ : ಎದೆ ಬೆನ್ನುಗಳಲ್ಲಿ ಕತ್ತರಿಯಾಗಿ ಬರುವಂತೆ ಉತ್ತರೀಯ ಬಿಗಿಯುವ ರೀತಿ.

ಚಳಿಮಂಚ : (ಚಳಿ=ಸೆಳೆ, ಚಿತ್ರ) ಸ್ಪ್ರಿಂಗಿನಂತೆ ಬಳುಕುವ ಸೆಳೆಗಳಿಂದ ಮಾಡಿದ ಮಂಚ.

ಜಕ್ಕಾತಿ : ಕೋವಿಯಂತೆ ಮದ್ದು ಹಾಕಿ ಸರಳಿನಿಂದ ಕುಟ್ಟಿ ಸದ್ದು ಮಾಡುವ ಒಂದು ಕೊಳವೆ.

ಜಳಕ : ಸ್ನಾನ.

ತನಿ : ತಂಪಾದ, ಮಧುರವಾದ.

ತನು : ತಂಪಾದ ಅಥವಾ ಮಧುರವಾದ ಪೇಯ.

ತಂಬು : ಢೇರೆ (Tent).

ತುಡು : ತೊಂಡು (ತುಡು ಎಮ್ಮೆ=ಸ್ವೇಚ್ಛೆ ಮೇಯುವ ಎಮ್ಮೆ).

ತೆರಪು : ತೆರವು, ಅವಕಾಶ.

ತೊಂಡಿಲ (ತೊಂಡಿಲು) : ಹೆಣ್ಣು ಮಕ್ಕಳು, ಮುಖ್ಯವಾಗಿ ಮದುವಣಗಿತ್ತಿ, ಮುಡಿಯುವ ಹೂವಿನ ಬಾಸಿಗ.

ದಡಿಕಂಬಿ : (ದಡಿ=ಅಂಚು, ಕಂಬಿ=ಗೀಟು) ಅಂಚಿನ ಗೀಟು.

ದಂಡಿಗೆ : ಮನುಷ್ಯರು ಕುಳಿತುಕೊಳ್ಳುವ ಪಲ್ಲಕ್ಕಿ.

ದಿಕ್ಕುಮಕ : ದಿಕ್ಕು–ಮುಖ.

ದೀಡು : ಅಡವು, ಒತ್ತೆ.

ದುಗುಳು : ಧೂಳು.

ದೊಳ್ಳೊಟ್ಟೆ : ( ದೊಳ್ಳು–ಢೋಲು ) ಢೋಲಿನಂತಿರುವ ಹೊಟ್ಟೆ.

ನಿಸ್ತ್ರೆ : ಹೆಣ್ಣು

ನ್ಯಾವಳ (ನ್ಯಾವಾಳ) : ನೇವಳ, ಉಡುದಾರ.

ಪಡಿ : ಒಂದು ಅಳತೆ, ಅಳೆದು ಕೊಡುವ ಭಿಕ್ಷೆ .

ಪಾತರೆ : ಪಾತ್ರೆ.

ಬಟ್ಟು : ದುಂಡು, ಗುಂಡಾಗಿರುವ ಯಾವುದೊಂದು ಆಭರಣ.

ಬಡ್ಡೆ : ಬುಡ, ಕೆಳಭಾಗ (ಬಡ್ಡೆಯ=ಬುಡದ).

ಬಣ್ಣ : ಸೀರೆ.

ಬದುಕು : ಕೆಲಸ.

ಬನಿ : ಸಾರ.

ಬರ: ಕ್ಷಾಮ, ಕಡಿಮೆಯಾಗುವುದು (ಬರನೋ=ಬರವೋ=ಕಡಿಮೆಯೋ).

ಬರಕ : ಮೊಲದಂತೆಯೇ, ಅದಕ್ಕಿಂತ ತುಸು ದೊಡ್ಡದಾಗಿರುವ ಪ್ರಾಣಿ.

ಬಾನಿ: (ಅಭ್ಯಂಜನಾದಿಗಳಿಗೆ ಬಳಸುವ) ಅಗಲಬಾಯಿಯ ಬೃಹದಾಕಾರದ ಪಾತ್ರೆ.

ಬಾರಿಕ : ಚಾವಟಿ ಹಿಡಿದ ಕಾವಲುಗಾರ.

ಬಾಸಿಂಗ : ಬಾಸಿಗ.

ಜಿರಿಸು (ಜೆರೆಸು): ಅಟ್ಟಿಸಿಕೊಂಡು ಹೋಗು, ಓಡಿಸು.

ಬೋವೇರು : ಪಲ್ಲಕ್ಕಿ ಹೊರುವ, ಗಾಡಿ ಹೊಡೆಯುವ ಅಥವಾ ಅಂಬಿಗರ ಕೆಲಸದ ಒಂದು ಜಾತಿಯ ಜನ.

ಭಗತಾಳಿ : ಮಾಂಗಲ್ಯದ ಪದಕ.

ಮಕ : ಮುಖ.

ಮಡಿವು: ಮಡಿಯುವಂತೆ ಮಾಡು, ಸಾಯಿಸು.

ಮತ್ತ್ರೋರು : ಮತ್ತುಳಿದವರು, ಉಳಿದವರು.

ಮದುವಳಿಗೆ : ಮದುವೆಯ ಹೆಣ್ಣು.

ಮರಗಟ್ಟು : ಮರದಂತೆ ನಿಶ್ಚಲವಾಗು.

ಮಲಕು : ಹೆಣೆದ ಗಂಟು.

ಮಳ್ಳು : ಮರುಳು.

ಮಾಡು : ಮನೆಯ ಮೇಲುಹೊದಿಕೆ.

ಮಾರೆ : ಮೋರೆ, ಮುಖ.

ಮಿಕ : ಮಿಗ, ಜಿಂಕೆ.

ಮೆತ್ತು : (ಮೇಲಿತು) ಉಪ್ಪರಿಗೆ.

ಸಂಕ : ಮರದ ಸಣ್ಣ ಸೇತುವೆ, ದಾಟು ತುಂಡು.

ಸಮ : ಸರಿ.

ಸನ್ನರಿಸು : ಸಾವರಿಸು, ಅಣಿಮಾಡು.

ಸಾಚು : ಸಾರ್ಚು, ಚಾಚು.

ಸಾಲೆ: ಸೀರೆ, ಶಾಲೆ (Hall).

ಸಿಂಗಾರ: ಅಡಕೆಯ ಹೂ.

ಸೂಡು: ಮುಡಿ.

ಹಕ್ಕಲು: ಬಯಲು.

ಹಚ್ಚಡ: ಹೊದೆಯುವ ವಸ್ತ್ರ.

ಹದು: ಅವಕಾಶ.

ಹಣಿಯೆಣ್ಣೆ: ಹಣಿ+ಎಣ್ಣೆ (ಹಣಿ=ತಿಳಿಯಾದದ್ದು, ನೀರಾದದ್ದು).

ಹಣಿನೀರು: ತಿಳಿಯಾದ ನೀರು.

ಹಾರಳ್ಳಿ: (ಹಾರು+ಹಳ್ಳಿ) ಹೊಸದಾಗಿ ಮಾಡಿದ ಹಳ್ಳಿ.

ಹುಗ್ಗಾಟ: ಹುದುಗುವ ಆಟ, ಅಡಗುವ ಹಾಗೂ ಹುಡುಕುವ ಒಂದು ಬಗೆಯ ಆಟ.

ಹೆಸೆ: ಕೊಂಬೆ, ಹರೆ.

ಹೆಳೆ: ನೆವ, ಸಬೂಬು.

ಹೊಗಳು: ಉದ್ಧರಿಸಿ ಹೇಳು.

ಹೊಯ್ಗೆ: ಮರಳು.

**ಕೆಲವು ಸೂಚನೆಗಳು :** ಉಕ್ಯಾವು, ಹಬ್ಯಾವು, ಹುಚ್ಯಾಕೆ, ಹಚ್ಯಾರೊ, ಕೊಚ್ಯಾರೊ, ಸತ್ಹುಟ್ರೊ—ಈ ಪದಗಳನ್ನು ಸೌಲಭ್ಯಕ್ಕಾಗಿ ಹೀಗೆ ಬರೆದಿದ್ದರೂ ಉಚ್ಚರಿಸುವಾಗ ಉಕ್ಕ್ಯಾವು, ಹಬ್ಬ್ಯಾವು ಮುಂತಾಗಿ ಒತ್ತಿನ ಸಮೇತ ಉಚ್ಚರಿಸಬೇಕು.

ಹಲವು ಪದಗಳು ಅನುಸ್ವಾರಸಮೇತವಾಗಿ ಉಚ್ಚರಿಸಲ್ಪಡುವುವಾದರೂ, ಸುಲಭಸಂಕೇತಗಳ ಅಭಾವದಿಂದ ಇಲ್ಲಿ ಅವುಗಳನ್ನು ಗುರುತಿಸಿಲ್ಲ. ಉದಾ—'ನ್ಯಾವಳ' ಎಂಬಲ್ಲಿನ 'ವ' ಕಾರ, 'ಸಾಚು' ಎಂಬಲ್ಲಿನ 'ಸಾ', 'ಹೊಯ್ಗೆ' ಎಂಬಲ್ಲಿನ 'ಯ' ಇವು ಅನುಸ್ವಾರ ಸಮೇತ ಉಚ್ಚರಿಸಲ್ಪಡುತ್ತವೆ. ಅದರಂತೆಯೇ ಸ್ವರಗಳಲ್ಲಿ ಒಂದೊಂದನ್ನೂ ಹಲವು ರೀತಿಗಳಲ್ಲಿ ಉಚ್ಚರಿಸುವ ರೂಢಿಯಿದೆ; ಅದನ್ನೂ ಮುದ್ರಣದಲ್ಲಿ ಗುರುತಿಸಿಲ್ಲ.

ಬೇಗ, ಬೇಟೆ, ಓಲೆ–ಮುಂತಾದ ಪದಗಳು ಗ್ರಾಮ್ಯಭಾಷೆಯಲ್ಲಿ ಬ್ಯಾಗ, ಬ್ಯಾಟೆ, ವಾಲೆ–ಮುಂತಾಗಿ ಪರಿವರ್ತನಗೊಳ್ಳುವುದು ಸಾಧಾರಣ ವಾದ್ದರಿಂದ ಅಂಥ ಸಾಮಾನ್ಯ ಅಪಭ್ರಂಶಗಳಿಗೆ ಅರ್ಥ ಕೊಟ್ಟಿಲ್ಲ.

ತುಸು ತೊಡಕು ತೋರಬಹುದಾದ ಕೆಲವು ಸಮಾಸಗಳು ಇಂಥವು :

ಆರಿಕ್ಯಾಗಿ=ಅರಿಕೆ+ಆಗಿ.
ಕಾಕ್ಕೆಲ್ಲ=ಕಾಕೆ+ಎಲ್ಲ.
ಕೈಯಗನಡಕೆ=ಕೈಯ್ಯಗನ (ಕೈಯ್ಯಾಗಿನ) + ಅಡಿಕೆ.
ಬ್ಯಾಗನೋಡೆ=ಬ್ಯಾಗನೆ + ಓಡೆ—ಇತ್ಯಾದಿ.

ಗುತ್ತಿ, ಗ್ರಾವೆ, ಹೆನಗೆರೆ–ಇವು ನಮ್ಮತ್ತಣ ಜಾನಪದ ಗೀತಗಳಲ್ಲಿ ಮೇಲಿಂದಮೇಲೆ ಉದ್ಧೃತವಾಗುವ ಸೀಮೆ (ಹಳ್ಳಿಗಳ ಗುಂಪು) ಯ ಹೆಸರುಗಳು.

---

## ತಿದ್ದುಪಡಿ

[ತಿದ್ದುಪಡಿಯ ಪಟ್ಟಿ ಉದ್ದ ಬೆಳೆದುದಕ್ಕಾಗಿ ಪ್ರಕಾಶಕರು ಮತ್ತು ಮುದ್ರಕರು ಓದುಗರ ಕ್ಷಮೆ ಬೇಡುತ್ತಾರೆ.]

| ಪುಟ | ಸಾಲು | ತಪ್ಪು | ಸರಿ |
|---|---|---|---|
| ೨೪ | ೪ | ನಿಟುಸಿರು | ನಿಟ್ಟುಸಿರು |
| ೨೬ | ೨೨ | ಹೋಗುತ್ತಾ....ಳೆ | ಹೋಗುತ್ತಾಳೆ.... |
| ೩೧ | ೧೯ | ನೆರೆ– | ನೆರ– |
| ೩೪ | ೧೩ | ದಿನವು | ದಿನವೂ |
| ೪೦ | ೫ | ಮನೆಗ್ನೆ | ಮನೆಗೆ |
| ,, | ೬ | ಪ್ರಶಿ– | ಪ್ರಶ್ನಿ– |

| ಪುಟ | ಸಾಲು | ತಪ್ಪು | ಸರಿ |
|---|---|---|---|
| ೪೨ | ೧೪ | ತೊಡಗಿಟ್ಟು | ತೊಡೆಗಿಟ್ಟು |
| ೫೭ | ೩ | ಕೊಟ್ಟ | ಕೊಟ್ಟು |
| ೬೭ | ೨೭ | ಬಸವ ಸಂತಾನದ | ಬಸವಸಂತಾನದ |
| ೬೮ | ೪ | ಒೂಳೆದು, ಓಲವಿನ | ಹೊಳೆದು, ಒಲವಿನ |
| ೭೦ | ೧೩ | ಅಚ್ಚರಿಪಡುವಂಥದು | ಅಚ್ಚರಿಪಡಿಸುವಂಥದು |
| ,, | ೧೬ | ಕಲೆಮಾನವನಿಂದ | ಕಲೆ ಮಾನವನಿಂದ |
| ೭೬ | ೮ | ಸೊಂಕಿದರೆ | ಸೋಂಕಿದರೆ |
| ೭೭ | ೧೩ | ಆಷ್ಟರಲ್ಲಿ | ಅಷ್ಟರಲ್ಲಿ |
| ,, | ೧೮ | ಇಳೆದನು | ಇಳಿದನು |
| ೭೯ | ೭ | ಆಟ್ಟ | ಆಟ |
| ,, | ೧೪ | ನೂರೆಂಟು | ನೂರೆಂಟು |
| ೮೧ | ೮ | ಸಾಗುತ್ತಿದ್ದಾಳೆ. | ಸಾಗುತ್ತಿದ್ದಾಳೆ |
| ,, | ೨೫ | ಇಂದ್ರಿಯಳೆಲ್ಲ | ಇಂದ್ರಿಯಗಳೆಲ್ಲ |
| ೮೪ | ೧೫ | ಮನೆಯಿಂವ | ಮನೆಯಿಂದ |
| ೮೬ | ೧೦ | ತೊಳುಲುವಂತೆ | ತೊಳಲುವಂತೆ |
| ,, | ೧೫ | ಉಳಿಯುವುದು | ಉಳಿಯುವುದೂ |
| ,, | ೧೯ | ದೇಹವುಳಿದ | ದೇಹವುಳಿಯಬೇಕಾಗಿದ್ದ |
| ೮೭ | ೯ | ಹೆಸರಿಸ | ಹೆಸರಿನ |
| ೯೫ | ೯ | ಕಳೆದ | ಕಳೆದು |
| ೯೭ | ೫ | ಆತ್ತಲಟ್ಟದ | ಅತ್ತಲಟ್ಟದ |
| ೯೮ | ೯ | ಅದ | ಅದು |
| ೯೯ | ೧೧ | ಆಡಗಿತೋ | ಅಡಗಿತೋ |
| ೧೦೧ | ೧೦ | ಮೀಯೋಳ | ಮೀಯೋಳೆ |
| ,, | ೨೧ | ನಮುಗೀಟು | ನಮುಗೀಟು |
| ೧೦೩ | ೨೪ | ಆದ್ಭುತ | ಅದ್ಭುತ |
| ೧೧೧ | ೬ | ಹರಿಯುದ | ಹರಯದ |

| ಪುಟ | ಸಾಲು | ತಪ್ಪು | ಸರಿ |
|---|---|---|---|
| ೧೧೮ | ೧೫ | ತಾಯ | ತಾಯಿ |
| ೧೨೧ | ೩ | ಅದೇವೂತು | ಅದೇ ಮಾತು |
| ೧೨೨ | ೨೩ | ನನಗೋಯ್ದು | ನನೆಗೊಯ್ದು |
| ೧೨೩ | ಶೀರ್ಷಿಕೆ | ಹುಲ | ಹಾಲ |
| ೧೨೪ | ೧೬ | ತೆರದವು | ತೆರೆದವು |
| ೧೨೬ | ೧೮ | ಕೊಡುತ್ತ್ತೇನೆ | ಕೊಡುತೇನೆ |
| ೧೩೦ | ೧೨ | ಅಗುವು– | ಅಗುವು– |
| ,, | ೨೦ | ನಟ್ಟಿರಲು। | ನಟ್ಟಿರಲು– |
| ,, | ೨೧ | –ವವಳಂತೆ। | -ವವಳಂತೆ– |
| ,, | ೨೩ | ಹೊಗೊಪ್ಪಲಿನಲ್ಲಿ | ಹೂಗೊಪ್ಪಲಿನಲ್ಲಿ |
| ೧೩೧ | ೨೨ | ಇ ರೂಪ | ಈ ರೂಪ |
| ೧೩೨ | ೨ | –ದಳು | –ದಳು. |
| ,, | ೭ | ಹದವಯಡೆ | ಹದಮಾಡೆ |
| ,, | ೯ | ತೊಳಿದಿಡೆ | ತೊಳೆದಿಡೆ |
| ೧೩೫ | ೪ | ಚೆಲುಯುವ | ಚೆಲುವೆಯುವ |
| ೧೩೭ | ಶೀರ್ಷಿಕೆ | ಸೀರೆಯಿಂತಾದ | ಸೀರೆಯಿಂತಾದು |
| ,, | ೫ | ಬೆನ್ನೆಗೇರಿಸಿ | ಬೆನ್ನಿಗೇರಿಸಿ |
| ೧೩೯ | ೧೦ | ಕಾತುರದಿಂದ | ಕಾತರದಿಂದ |
| ,, | ೧೫ | ವಿಚಿತ್ರಗಳ | ವಿಚಿತ್ರ |
| ೧೪೧ | ೨೭ | ಮಲಗಿದಲ್ಲಿಂದಲೇ. | ಮಲಗಿದಲ್ಲಿಂದಲೇ, |
| ೧೪೨ | ೧ | ಕದಗಳತೆರೆಯೋಕೆ | ಕದಗಳ ತೆರೆಯೋಕೆ |



## ಈ ಗ್ರಂಥವನ್ನು ಕುರಿತು.......

ಕನ್ನಡನಾಡಿನ ಮಲೆನಾಡು ಪ್ರದೇಶದಲ್ಲಿ ದೀಪಾವಳಿಯ ರಾತ್ರಿಗಳಲ್ಲಿ ಮನೆಯಿಂದ ಮನೆಗೆ ದೀಪವನ್ನು ಕೊಡುತ್ತ ಹಾಡುತ್ತ ಹೋಗುವ ಒಂದು ರಮ್ಯ ಸಂಪ್ರದಾಯವಿದೆ. ಆ ಸಂಪ್ರದಾಯದ ಸೊಗಸನ್ನು ಪರಿಚಯ ಮಾಡಿಕೊಡುವ ಗ್ರಂಥ ಇದು.

ಈ ಗ್ರಂಥದಲ್ಲಿ, ದೀಪಾವಳಿಯಲ್ಲಿ 'ದೀಪ ನೀಡುತ್ತ' ಹೋಗುವ ಕೆಲವು ಜಾನಪದ ಗಾಯಕರು ಹಾಡುವಂಥ ಅದ್ಭುತ ರಮ್ಯ ಕಥಾಗೀತ ಗಳನ್ನು ಸಂಗ್ರಹಿಸಿ ಕೊಡಲಾಗಿದೆ. ಗೀತಗಳ ಜೊತೆಯಲ್ಲಿ ಸಾರಗ್ರಾಹಿಯಾದ ಅನುವ್ಯಾಖ್ಯೆ ಇದೆ.

ಈ ಸಂಕಲನದ ಕಥಾಗೀತಗಳಲ್ಲಿ ತಲಸ್ಪರ್ಶಿಯಾದ ಘಟನೆ ಗಳಿವೆ; ಬಗೆಬಗೆಯ ಬಗೆನೆಯ್ಗೆಯ ಪಾತ್ರಗಳಿವೆ; ರಮ್ಯ ವರ್ಣನೆಗಳಿವೆ. ಜೀವನದ ಸವಿ ಸಾರಗಳೂ ಬೇವುನೋವುಗಳೂ ಇಲ್ಲಿ ಮನೋಹರವಾಗಿ ಬಂದಿವೆ. ಇಲ್ಲಿ ಶೃಂಗಾರವಿದೆ, ವೀರವಿದೆ, ಹಾಸ್ಯವಿದೆ, ಕರುಣೆ ಇದೆ. ಜೀವನವನ್ನು ಕುರಿತ ಸಂಭಾವನಾ ದೃಷ್ಟಿ ಈ ಗೀತಗಳಲ್ಲಿ ಉದ್ದಕ್ಕೂ ಮಿಂಚಿ ಹೊಳಲಿಟ್ಟದೆ.... ಒಟ್ಟನಲ್ಲಿ, ನಾವು ಉತ್ತಮ ಕಾವ್ಯವೊಂದು ಯಾವುದನ್ನು ಕರೆಯ ಬಹುದೋ ಅಂಥ ಗೀತಗಳು ಇಲ್ಲಿವೆ. ಕನ್ನಡದ ಕೆಲವು ಶ್ರೇಷ್ಠ ಜಾನಪದ ಕಥನಗೀತಗಳು ಇಲ್ಲಿ ಮೊದಲ ಬಾರಿಗೆ ಸಂಕಲಿತ ವಾಗಿವೆ.